ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

## ಪ್ರಕಾಶಕರ ಮಾತು

ಮಕ್ಕಳ ವೈಜ್ಞಾನಿಕ ಬೆಳವಣಿಗೆಯಲ್ಲಿ ಕಥೆಗಳಿಗೆ ಮಹತ್ವದ ಪಾತ್ರವಿದೆ. ಕಥೆಗಳ ಮೂಲಕ ಮಕ್ಕಳ ಮನಮಸ್ತಿಷ್ಕಗಳನ್ನು ಯಾವ ದಿಕ್ಕಿಗೆ ಬೇಕಾದರೂ ತಿರುಗಿಸಬಹುದು. ಮೂಢನಂಬಿಕೆ, ಕಂದಾಚಾರ, ಬಹುದೇವತ್ವ ಅಥವಾ ನಾಸ್ತಿಕತೆಗಳನ್ನು ಬಿಂಬಿಸುವಂತಹ ಕಥೆಗಳಾದರೆ ಮಕ್ಕಳು ಅದರಂತೆಯೇ ಆಲೋಚಿಸುತ್ತಾ, ಅವುಗಳನ್ನು ಮೈಗೂಡಿಸಿಕೊಳ್ಳುತ್ತಾ ಬೆಳೆಯುತ್ತಾರೆ. ಅದರಿಂದ ಸಮಾಜದ ಮಟ್ಟಿಗೆ ಮುಂದೆ ಅವರು ಪೀಡೆಯಾಗಿ ಪರಿಣಮಿಸುತ್ತಾರೆ.

ಆದರೆ ಧಾರ್ಮಿಕ ಶ್ರದ್ಧೆ ಮತ್ತು ನೀತಿಕಥೆಗಳ ಮೂಲಕ ಮಕ್ಕಳ ಮನ ಮಸ್ತಿಷ್ಕಗಳನ್ನು ರೂಪಿಸಿದರೆ ಅವರ ಬೆಳವಣಿಗೆಯು ಸರಿಯಾದ ದಿಕ್ಕಿನಲ್ಲಿ ಸಾಗುವುದು. ಮಕ್ಕಳಲ್ಲಿ ಸತ್ಯ, ನ್ಯಾಯ, ಪ್ರೀತಿ, ಔದಾರ್ಯ, ಮಾನವೀಯತೆಯಂತಹ ಸದ್ಗುಣಗಳು ಬೆಳೆದು ಅವರು ಸಮಾಜ ಮತ್ತು ದೇಶಕ್ಕೆ ಹಿತಕಾರಿಯಾದ ಸತ್ಪ್ರಜೆಗಳಾಗಿ ಮಾರ್ಪಡುವರು.

ಈ ನಿಟ್ಟಿನಲ್ಲಿ 'ಬಂಗಾರದ ಕೊಡಲಿ' ಎಂಬ ಈ ಕಥಾ ಸಂಕಲನದಲ್ಲಿ 9 ನೀತಿ ಕಥೆಗಳಿದ್ದು, ಮಕ್ಕಳನ್ನು ಸರಾಗವಾಗಿ ಓದಿಸಿಕೊಂಡು ಹೋಗುತ್ತದೆ. ಮಕ್ಕಳ ನೈತಿಕ ಹಾಗೂ ವೈಚಾರಿಕ ಬೆಳವಣಿಗೆಗೆ ಈ ಕೃತಿಯು ಸಹಕಾರಿಯಾಗಲೆಂದು ಹಾರೈಸುತ್ತೇವೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ

# ಲಾಭದ ವ್ಯಾಪಾರ

**ಹ.** ಅಲೀ(ರ) ಪ್ರವಾದಿವರ್ಯರ(ಸ) ಪ್ರೀತಿಯ ಸಂಗಾತಿಯಾಗಿದ್ದರು. ಪ್ರವಾದಿವರ್ಯರು(ಸ) ತಮ್ಮ ಪ್ರೀತಿಯ ಪುತ್ರಿ ಫಾತಿಮಾರನ್ನು(ರ) ಅವರಿಗೆ ವಿವಾಹ ಮಾಡಿಕೊಟ್ಟಿದ್ದರು. ಅವರದು ಸಂತೃಪ್ತ ಕುಟುಂಬವಾಗಿತ್ತು. ಅವರ ಜೀವನವು ಬಹಳ ಸಂಕಷ್ಟದಲ್ಲಿ ಕಳೆಯುತ್ತಾ ಇತ್ತು. ಒಮ್ಮೆ ನಿರಂತರ ಮೂರು ದಿನಗಳ ಕಾಲ ಅವರು ಹಸಿವೆಯಿಂದ ಬಳಲಿದರು.

ಈ ಸಂದರ್ಭದಲ್ಲಿ ಹಸಿವೆಯನ್ನು ಸಹಿಸಲಾಗದೆ ತನ್ನ ಪತಿಯೊಂದಿಗೆ "ನನ್ನ ಬಳಿ ಎರಡು ನಿಲುವಂಗಿ ಇದೆ. ಅದರಲ್ಲಿ ಒಂದನ್ನು ಮಾರಿ ನಮಗೆ ಆಹಾರವನ್ನು ತನ್ನಿ" ಎಂದರು. ಹ. ಅಲೀಯವರಿಗೆ ಹಾಗೆ ಮಾಡದೆ ಬೇರೆ ಯಾವ ದಾರಿಯೂ ಇರಲಿಲ್ಲ.

ಹ. ಅಲೀಯವರು(ರ) ಆ ನಿಲುವಂಗಿಯನ್ನು ತೆಗೆದುಕೊಂಡು ಪೇಟೆಗೆ ಹೋಗಿ ಆರು ದಿರ್ಹಮ್‌ಗೆ ಮಾರಿದರು. ನಂತರ ಪೇಟೆಯಿಂದ ಆಹಾರವನ್ನು ಖರೀದಿಸಲು ಹೊರಡುವಾಗ ದಾರಿ ಮಧ್ಯೆ ಮೂವರು ಅಸಹಾಯಕರಾಗಿ ನಿಂತಿರುವುದನ್ನು ನೋಡಿದರು. ಅವರನ್ನು ನೋಡುವಾಗ ಎಷ್ಟೋ ದಿನಗಳ ಕಾಲ ಆಹಾರ ಸೇವಿಸದವರ ಹಾಗೆ ಹ.ಅಲೀಯವರಿಗೆ(ರ) ಕಂಡಿತು.

ಅವರನ್ನು ಕಂಡು ಹ. ಅಲೀಯವರ(ರ) ಮನ ಕರಗಿತು. ಒಂದು ಕಡೆ ಪತ್ನಿ ಮಕ್ಕಳು ಹಸಿವೆಯಿಂದ ಇದ್ದಾರೆ. ಇನ್ನೊಂದು ಕಡೆ ಈ ಬಡ ಜನರು. ಏನು ಮಾಡುವುದು? ಕೊನೆಗೆ ಅವರು ಒಂದು ತೀರ್ಮಾನಕ್ಕೆ ಬಂದರು. ಮನೆಯವರು ಹಸಿವೆಯಿಂದ ಇದ್ದರೂ ಚಿಂತಿಲ್ಲ, ದೇವನು ಇಚ್ಛಿಸಿದರೆ ಬೇರೆ ದಾರಿ ತೋರಿಸುವನು ಎಂದು ಯೋಚಿಸಿ ಹಣವನ್ನು ಆ ಬಡವರಿಗೆ ಹಂಚಿ ಕೊಟ್ಟರು.

ಆ ಬಡವರ ಸಂತೋಷಕ್ಕೆ ಪಾರವೇ ಇರಲಿಲ್ಲ. ಇದನ್ನು ಕಂಡು ಅಲೀಯವರು(ರ) ತನ್ನ ಕುಟುಂಬದ ಸಂಕಷ್ಟವನ್ನು ಮರೆತು ಬಿಡುತ್ತಾರೆ. ಸಂತೋಷದಿಂದ ಅವರು ಮನೆಗೆ ಮರಳಿದರು.

ಸ್ವಲ್ಪ ಮುಂದೆ ಸಾಗಿದಾಗ ಓರ್ವ ವ್ಯಕ್ತಿ ಒಂಟೆಯಲ್ಲಿ ಬಂದು "ಈ ಒಂಟೆಯನ್ನು ಖರೀದಿಸುತ್ತೀರಾ?" ಎಂದು ಪ್ರಶ್ನಿಸಿದರು.

ಹ. ಅಲೀಯವರು(ರ) ಒಂಟೆಯನ್ನೊಮ್ಮೆ ಪರೀಕ್ಷಿಸಿದರು. ಉತ್ತಮ ಜಾತಿಯ ಒಂಟೆ. ನನಗೆ ಪ್ರಯಾಣಕ್ಕೆ ಉಪಯೋಗಿಸಬಹುದಾಗಿತ್ತು. ಆದರೆ ಹಣ....

"ನನ್ನ ಕೈಯಲ್ಲಿ ಹಣ ಇಲ್ಲ, ಸಹೋದರಾ..."

"ಹಣ ನಂತರ ಕೊಟ್ಟರೆ ಸಾಕು"

"ಇದರ ಬೆಲೆ ಎಷ್ಟು?"

"100 ದಿರ್ಹಮ್"

ಒಳ್ಳೆಯ ಒಂಟೆ, ಬೆಲೆ ಕೂಡಾ ಕಡಿಮೆ. ನನ್ನ ಪರಿಚಯವಿರುವ ವ್ಯಕ್ತಿ ಆಗಿರಬೇಕು. ಇಲ್ಲದಿದ್ದರೆ ಹಣ ಮತ್ತೆ ಸಿಕ್ಕಿದರೆ ಸಾಕು ಎಂದು ಹೇಳುತ್ತಿರಲಿಲ್ಲ. ಹೀಗೆ ಅಲೀಯವರು(ರ) ಆ ಒಂಟೆಯನ್ನು ಖರೀದಿಸಿ ಮುಂದೆ ಸಾಗಿದರು. ಆಗ ಓರ್ವ ವ್ಯಕ್ತಿ ಬಂದು, "ಓ ಅಬುಲ್ ಹಸನ್! ಈ ಒಂಟೆಯನ್ನು ಮಾರುತ್ತೀರಾ?" ಎಂದು ಕೇಳಿದರು.

ಪರಿಚಯವಿದ್ದ ವ್ಯಕ್ತಿ, ಆದ್ದರಿಂದ ಅಬುಲ್ ಹಸನ್ ಎಂದು ಕರೆದಿರಬಹುದು. "ಲಾಭ ಸಿಗುವುದಾದರೆ ಮಾರುತ್ತೇನೆ" ಎಂದು ಅಲೀಯವರು(ರ) ಉತ್ತರಿಸಿದರು.

ಹೀಗೆ ಅಲೀಯವರು(ರ) ಒಂಟೆಯನ್ನು ಆ ವ್ಯಕ್ತಿಗೆ 160 ದಿರ್ಹಮ್‌ಗೆ ಮಾರಿದರು. ಮುಂದೆ ಹೋಗುವಾಗ ಒಂಟೆಯನ್ನು ಅವರಿಗೆ ಮಾರಿದ ವ್ಯಕ್ತಿ ಸಿಕ್ಕಿದರು. ಅವರು ಒಂಟೆಯನ್ನು ಕೇಳಿದರು.

ಒಂಟೆಯನ್ನು ನಾನು 160 ದಿರ್ಹಮ್‌ಗೆ ಮಾರಿದೆ. ಅಲೀ(ರ) ಉತ್ತರಿಸಿದರು.

ಹೀಗೆ ಹ. ಅಲೀಯವರು(ರ) ಆ ವ್ಯಕ್ತಿಗೆ ನೀಡಲಿಕ್ಕಿರುವ ಹಣವನ್ನು ನೀಡಿದರು. ಇಬ್ಬರೂ ಸಂತೋಷದೊಂದಿಗೆ ಅಲ್ಲಾಹನನ್ನು ಸ್ತುತಿಸಿದರು.

ಅಲೀಯವರು(ರ) 60 ದಿರ್ಹಮ್‌ನಿಂದ ಮನೆಗೆ ಆಹಾರವನ್ನು ಖರೀದಿಸಿ ತನ್ನ ಪತ್ನಿಯ ಕೈಯಲ್ಲಿ ಕೊಟ್ಟರು. ಬಾಕಿ ಇದ್ದ ಹಣವನ್ನು ಪತ್ನಿಯ ಕೈಗೆ ನೀಡಿದರು. ಇದನ್ನು ಕಂಡು ಹ.ಫಾತಿಮಾರ(ರ) ಕಣ್ಣುಗಳು ಅರಳಿದವು. "ಆ ನಿಲುವಂಗಿಗೆ ಇಷ್ಟು ಹಣ ಸಿಕ್ಕಿತೇ?" ಎಂದು ಪ್ರಶ್ನಿಸಿದರು.

"ಬಟ್ಟೆಯನ್ನು ಆರು ದಿರ್ಹಮ್‌ಗೆ ಮಾರಿದೆ. ಅದರಿಂದ ನಾನು ನಿರ್ಗತಿಕರಿಗೆ ಸಹಾಯ ಮಾಡಿದೆ. ಅದಕ್ಕೆ ಅಲ್ಲಾಹನು ನೀಡಿದಂತಹ ಪ್ರತಿಫಲವಾಗಿದೆ ಇದು" ಎಂದು ಹ. ಅಲೀಯವರು(ರ) ನಡೆದ ಘಟನೆಯನ್ನು ವಿವರಿಸಿದರು. ಆರು ದಿರ್ಹಮ್‌ಗೆ 60 ದಿರ್ಹಮ್ ಲಾಭ! ಒಳಿತು ಮಾಡುವವರಿಗೆ ಅಲ್ಲಾಹನು ಅದನ್ನು ಹತ್ತು ಪಟ್ಟು ವೃದ್ಧಿಸಿ ಪ್ರತಿಫಲವನ್ನು ನೀಡುತ್ತಾನೆ.

ಫಾತಿಮಾರು(ರ) ಹೇಳಿದರು, ಪ್ರವಾದಿ ಮುಹಮ್ಮದ್‌ರು(ಸ) ಹೀಗೆ ಹೇಳಿರುವುದಾಗಿ ನಾನು ಕೇಳಿದ್ದೇನೆ, "ಭೂಮಿಯಲ್ಲಿರುವವರ ಮೇಲೆ ನೀವು ಕರುಣೆ ತೋರಿದರೆ ಆಕಾಶದಲ್ಲಿರುವವನು ನಿಮ್ಮ ಮೇಲೆ ಕರುಣೆ ತೋರುವನು."

# ಬಟ್ಟೆ ವ್ಯಾಪಾರಿಯ ಸತ್ಯಸಂಧತೆ

**ಬ**ಹಳ ಕಾಲದ ಹಿಂದೆ ಓರ್ವ ಮಹಾ ವಿದ್ವಾಂಸರಿದ್ದರು. ಅವರು ಇಮಾಮ್ ಗಝ್ಝಾಲಿ ಎಂಬ ಹೆಸರಿನಿಂದ ಪ್ರಸಿದ್ಧರು. ಅವರು ದೇವಭಯವಿರುವ ಓರ್ವ ಪ್ರಾಮಾಣಿಕ ವ್ಯಾಪಾರಿಯ ಕಥೆ ಹೇಳಿದ್ದಾರೆ. ಆ ಘಟನೆ ಹೀಗಿದೆ:

ಯೂನುಸ್‌ರ ಅಂಗಡಿಯಲ್ಲಿ ಅನೇಕ ತರಹದ ಬಟ್ಟೆ ಬರೆಗಳಿದ್ದವು. ಅವುಗಳಲ್ಲಿ ಕಡಿಮೆ ದರದ್ದೂ, ಹೆಚ್ಚು ದರದ್ದೂ ಇದ್ದವು. ಒಂದು ದಿನ ಅವರು ನಮಾಝ್‌ನ ನಿಮಿತ್ತ ತನ್ನ ಸೋದರ ಪುತ್ರನನ್ನು ಅಂಗಡಿಯಲ್ಲಿ ನಿಲ್ಲಿಸಿ ಮಸೀದಿಗೆ ಹೋದರು. ಆಗ ಓರ್ವ ವಿದೇಶಿ ವ್ಯಕ್ತಿ ಇವರ ಅಂಗಡಿಗೆ ಬಟ್ಟೆ ಬರೆಗಳನ್ನೆಲ್ಲಾ ಪರಿಶೀಲಿಸಿ ಒಂದು ಬಟ್ಟೆಯನ್ನು ಆಯ್ದು "ಇದರ ಬೆಲೆಯೆಷ್ಟು?" ಎಂದು ವಿಚಾರಿಸುತ್ತಾರೆ. ಸೋದರ ಪುತ್ರ "400 ದಿರ್ಹಮ್" ಎಂದು ಹೇಳಿದ. ಆ ವಿದೇಶಿ 400 ದಿರ್ಹಮನ್ನು ಪಾವತಿಸಿ ಬಟ್ಟೆಯನ್ನು ಖರೀದಿಸಿ ಹೊರಟು ಹೋಗುತ್ತಾರೆ. ಯೂನುಸ್ ನಮಾಝ್ ಮುಗಿಸಿ ಮಸೀದಿಯಿಂದ ಮರಳುತ್ತಿರುವಾಗ ದಾರಿ ಮಧ್ಯೆ ಹೊಸ ಬಟ್ಟೆಯನ್ನು ಕೈಯಲ್ಲಿ ಹಿಡಿದು ಬರುತ್ತಿರುವ ವ್ಯಕ್ತಿಯನ್ನು ನೋಡುತ್ತಾರೆ. ಕೈಯಲ್ಲಿ ಹಿಡಿದಿರುವ ವಸ್ತ್ರವನ್ನು ನನ್ನ ಅಂಗಡಿಯಿಂದ ಖರೀದಿಸಿರಬಹುದು ಎಂದು ಅಂದಾಜಿಸಿ ಯೂನುಸ್ ವಿದೇಶಿಗೆ ಸಲಾಮ್ ಹೇಳಿದರು. ವಿದೇಶಿ ವ್ಯಕ್ತಿಯ ಕೈಯಲ್ಲಿದ್ದ ಬಟ್ಟೆಯನ್ನು ಹಿಡಿದು "ಇದರ ಬೆಲೆ ಎಷ್ಟು?" ಎಂದು ಕೇಳಿದರು.

"400 ದಿರ್ಹಮ್."

"ಬೆಲೆ ತುಂಬಾ ಜಾಸ್ತಿಯಾಯಿತಲ್ಲಾ? ನೀವು ನನ್ನ ಜೊತೆ ಬನ್ನಿ ಈ ಬಟ್ಟೆಯನ್ನು ವಾಪಾಸು ಮಾಡೋಣ."

ಅದಕ್ಕೆ ಆ ವ್ಯಕ್ತಿ "ಬೇಡ, ಇದು ನನ್ನ ಮೆಚ್ಚುಗೆಯಿಂದ ಖರೀದಿಸಿದ ಬಟ್ಟೆ" ಎಂದು ಹೇಳಿದರು.

"ಆದರೂ ಇದರ ಬೆಲೆ ತುಂಬಾ ಜಾಸ್ತಿಯಾಯಿತು."

"ಚಿಂತಿಲ್ಲ, ನಮ್ಮ ಊರಿನಲ್ಲಾದರೆ ಈ ಬಟ್ಟೆಗೆ 500 ದಿರ್ಹಮ್ ಕೊಡಬೇಕು. ಆ ಲೆಕ್ಕದಲ್ಲಿ ನನಗೆ 100ದಿರ್ಹಮ್ ಲಾಭವೇ ಆಗಿದೆ."

"ಅದೇನೇ ಇರಲಿ, ನಾನು ನಿಮಗೆ ಇದನ್ನು 200 ದಿರ್ಹಮ್‌ಗೆ ಖರೀದಿಸಿ ಕೊಡುತ್ತೇನೆ. ಸಹೋದರಾ! ಮುಸ್ಲಿಮನು ಇನ್ನೊಬ್ಬ ಮುಸ್ಲಿಮನ ಹಿತಚಿಂತಕನಾಗಿದ್ದಾನೆ" ಎಂದು ಯೂನುಸ್ ಹೇಳಿದರು.

ಆಗಲಿ, 200 ದಿರ್ಹಮ್ ಲಾಭ ಸಿಗುವಾಗ ಯಾಕೆ ಬಿಡುವುದು ಎಂದು ಮನದಲ್ಲೇ ಯೋಚಿಸಿ ಅವರು ಯೂನುಸ್‌ರೊಂದಿಗೆ ಅಂಗಡಿಗೆ ಮರಳುತ್ತಾರೆ. ಯೂನುಸ್ ಅಂಗಡಿಗೆ ತಲಪಿದೊಡನೆ ಸೋದರ ಪುತ್ರನೊಡನೆ "ಇವರು ಈ ಬಟ್ಟೆಯನ್ನು ಇಲ್ಲಿಂದ ಪಡೆದದ್ದಾ" ಎಂದು ಪ್ರಶ್ನಿಸಿದಾಗ ಆತ "ಹೌದು" ಎಂದನು.

ಯೂನುಸ್ ಅಂಗಡಿಗೆ ಪ್ರವೇಶಿಸಿ 200 ದಿರ್ಹಮ್ ಹಿಂದಿರುಗಿಸಿದರು. "ಇದು ನನ್ನ ಅಂಗಡಿ. ಈ ಬಟ್ಟೆಯ ಬೆಲೆ 200 ದಿರ್ಹಮ್ ಆಗಿದೆ" ಎಂದರು. ನಂತರ ಯೂನುಸ್ ತನ್ನ ಸೋದರ ಪುತ್ರನಲ್ಲಿ "ನೀನು ಈ ಬಟ್ಟೆಯನ್ನು 400 ದಿರ್ಹಮ್‌ಗೆ ಯಾಕೆ ನೀಡಿದ್ದು" ಎಂದು ಕೇಳಿದಾಗ ಆತ, ಅವರು ಅದರ ಬೆಲೆ ಕೇಳಿದಾಗ "400 ದಿರ್ಹಮ್ ಎಂದು ಹೇಳಿದೆ ಅದರಲ್ಲೇನು ತಪ್ಪು?" ಎಂದು ಉತ್ತರಿಸಿದನು.

"ಸರಿ. ನೀನಾದರೆ ಆ ಬಟ್ಟೆಯನ್ನು ಅಷ್ಟು ಬೆಲೆಗೆ ಖರೀದಿಸುವೆಯಾ?"

"ಇಲ್ಲ."

"ಯಾಕೆ?"

"ಅದರ ನಿಜವಾದ ಬೆಲೆ ನನಗೆ ತಿಳಿದಿದೆ."

"ಹಾಗಾದರೆ ಬೆಲೆ ತಿಳಿಯದವರಿಗೆ ಮೋಸ ಮಾಡಬಹುದೇ?"

"ಹಾಗಲ್ಲ, ವ್ಯಾಪಾರದಲ್ಲಿ ಪರಸ್ಪರ ಸಂತೃಪ್ತಿ ಮುಖ್ಯವಲ್ಲವೇ?"

"ಹಾಗಾದರೆ ನೀನು ಇಷ್ಟಪಡದ್ದನ್ನು ನಿನ್ನ ಸಹೋದರನಿಗೆ ಹೇಗೆ ಇಷ್ಟಪಟ್ಟೆ? ತನಗಾಗಿ ಬಯಸುವುದನ್ನು ತನ್ನ ಸಹೋದರನಿಗಾಗಿಯೂ ಬಯಸುವ ತನಕ ನಿಮ್ಮ ಪೈಕಿ ಯಾರೂ ವಿಶ್ವಾಸಿಯಾಗಲಾರರು ಎಂದು ಪ್ರವಾದಿ ಮುಹಮ್ಮದ್‌ರು(ಸ) ಹೇಳಿದ್ದು ತಿಳಿಯದೇ."

ಯೂನುಸ್‌ರ ಈ ಮಾತು ಕೇಳಿದಾಕ್ಷಣವೇ ಸೋದರ ಪುತ್ರನಿಗೆ ತನ್ನ ತಪ್ಪಿನ ಅರಿವಾಯಿತು. ಕೂಡಲೇ ಅವನು ಆ ವಿದೇಶಿಯೊಂದಿಗೆ ಕ್ಷಮೆ ಯಾಚಿಸಿದನು.

ಆಗ ವಿದೇಶಿ ವ್ಯಕ್ತಿ ಅವನ ಭುಜದ ಮೇಲೆ ಕೈಯಿಟ್ಟು "ಮಗನೆ, ದೇವನು ನಿನ್ನನ್ನು ಕ್ಷಮಿಸಲಿ. ಸತ್ಯಸಂಧತೆ, ಪ್ರಾಮಾಣಿಕತೆ ಇದ್ದರೆ ಮಾತ್ರ ಯಾವುದೇ ಕೆಲಸದಲ್ಲಿ ಅಲ್ಲಾಹನ ಅನುಗ್ರಹವಿರುತ್ತದೆ" ಎಂದರು.

## ತಾಯಿ ಮತ್ತು ಮಗ

ಪ್ರವಾದಿ ಮುಹಮ್ಮದ್‌ರ(ಸ) ಕಾಲದಲ್ಲಿ ನಡೆದ ಘಟನೆ. ಮದೀನಾದಲ್ಲಿ ಅಲ್ಕಮ ಎಂಬ ಹೆಸರಿನ ಯುವಕನಿದ್ದ. ಮಹಾ ದೇವಭಕ್ತ, ಸಜ್ಜನ ಮತ್ತು ದಯಾಳುವಾಗಿದ್ದ. ಅವನು ಒಮ್ಮೆ ಮಾರಕ ರೋಗಕ್ಕೆ ತುತ್ತಾಗುತ್ತಾನೆ.

ರೋಗಿಯ ಸಂದರ್ಶನ ಬಹಳ ಪುಣ್ಯವಿರುವ ಕರ್ಮ. ಆದುದರಿಂದ ಕುಟುಂಬಸ್ಥರು, ನೆರೆಹೊರೆಯವರು, ದೂರದಲ್ಲಿದ್ದವರು ಹೀಗೆ ಹಲವಾರು ಮಂದಿ ಆ ಯುವಕನನ್ನು ಸಂದರ್ಶಿಸಲು ಬಂದರು. ಸಂದರ್ಶಕರಲ್ಲಿ ಕೆಲವರಿಗೆ ಇದು ಗುಣಮುಖವಾಗುವ ರೋಗವಲ್ಲ, ಇವರಿಗೆ ಮರಣಾಸನ್ನವಾಗಿದೆ ಎಂದು ತಿಳಿಯಿತು. ಮರಣಾಸನ್ನನಾದವರಿಗೆ ಶಹಾದತ್ ಕಲಿಮ ಹೇಳಿ ಕೊಡಬೇಕು ಎಂದು ಪ್ರವಾದಿ ಮುಹಮ್ಮದ್‌ರು(ಸ) ಕಲಿಸಿದ್ದಾರೆ. ಆದುದರಿಂದ ಮರಣಾಸನ್ನರಾಗಿದ್ದ ಅಲ್ಕಮರಿಗೆ ಪವಿತ್ರ ವಚನವನ್ನು ಹೇಳಿ ಕೊಟ್ಟರು. ಅಲ್ಕಮರಿಗೆ ಬೇರೆ ಮಾತು ಹೇಳಲು ಸಾಧ್ಯವಾಗುತ್ತದೆ. ಆದರೆ ಕಲಿಮ ಉಚ್ಚರಿಸಲು ಸಾಧ್ಯವಾಗುತ್ತಾ ಇಲ್ಲ. ಇದೇನು ಸಂಗತಿ, ಪ್ರವಾದಿ ಮುಹಮ್ಮದ್‌ರ(ಸ) ಬಳಿ ವಿಷಯವನ್ನು ತಿಳಿಸಿದರು.

ಪ್ರವಾದಿವರ್ಯರು(ಸ) "ಅವರ ತಂದೆ ತಾಯಿ ಬದುಕಿದ್ದಾರೆಯೇ?" ಎಂದು ವಿಚಾರಿಸುತ್ತಾರೆ. ಅವರು ಹೇಳಿದರು, "ಅವರ ತಂದೆ ಈ ಹಿಂದೆಯೇ ಮರಣ ಹೊಂದಿದ್ದಾರೆ. ಆದರೆ ಅವರ ವೃದ್ಧ ತಾಯಿ ಬದುಕಿದ್ದಾರೆ."

"ಹಾಗಾದರೆ ಅವರನ್ನು ಕರೆದು ತನ್ನಿ" ಎಂದು ಪ್ರವಾದಿವರ್ಯರು(ಸ) ಹೇಳಿದರು. ಆ ವೃದ್ಧ ಮಾತೆ ಬಂದಾಗ ಪ್ರವಾದಿವರ್ಯರು(ಸ) "ನಿಮ್ಮ ಮಗನ ಜೀವನ ಹೇಗಿತ್ತು?" ಎಂದು ಪ್ರಶ್ನಿಸಿದರು. ಆ ವೃದ್ಧ ತಾಯಿ ಹೇಳಿದರು, "ನನ್ನ ಮಗ ಅಲ್ಕಮ ದೇವಭಕ್ತ. ಅಲ್ಲಾಹನ ಆಜ್ಞೆಗಳನ್ನು ಸರಿಯಾಗಿ ಪಾಲಿಸುತ್ತಾನೆ. ನಮಾಝ್, ಉಪವಾಸ ವ್ರತ, ದಾನಧರ್ಮ ಇದೆಲ್ಲವನ್ನೂ ಮಾಡುತ್ತಾನೆ."

"ನಿಮ್ಮೊಂದಿಗೆ ಅವನ ವರ್ತನೆ ಹೇಗಿದೆ? ಎಂದು ಪ್ರವಾದಿವರ್ಯರು(ಸ) ಪ್ರಶ್ನಿಸಿದಾಗ, ಬೇಸರದಿಂದ "ಪ್ರವಾದಿವರ್ಯರೇ(ಸ) ನನ್ನೊಂದಿಗೆ ಅವನ ವರ್ತನೆ ಸರಿಯಿಲ್ಲ. ನನಗೆ ಅವನ ಮೇಲೆ ಅಸಮಾಧಾನವಿದೆ, ಆತನ ಪತ್ನಿಯ ಮುಂದೆ

ನನ್ನನ್ನು ನಿಂದಿಸುತ್ತಾನೆ. ಆದುದರಿಂದ ನಾನು ಬೇರೆಯೇ ಇರುವುದು" ಎಂದು ಹೇಳಿದರು.

ಪ್ರವಾದಿವರ್ಯರು(ಸ) ಹೇಳಿದರು, "ಅಲ್ಕಮರ ನಾಲಗೆಯಿಂದ ಪವಿತ್ರ ವಚನ ಹೊರಡದಿರಲು ಕಾರಣ ತಾಯಿಯ ಕೋಪವಾಗಿದೆ." ಆತನನ್ನು ಕ್ಷಮಿಸುವಂತೆ ಪ್ರವಾದಿವರ್ಯರು(ಸ) ವೃದ್ಧೆಯನ್ನು ವಿನಂತಿಸಿದಾಗ ಆಕೆ ಒಪ್ಪಲಿಲ್ಲ. ಆಗ ಪ್ರವಾದಿಯವರು(ಸ) ಅಲ್ಕಮರನ್ನು ಅಗ್ನಿಕುಂಡಕ್ಕೆ ಹಾಕಲಿಕ್ಕಾಗಿ ಸೌದೆ ತರಲು ಬಿಲಾಲ್‌ರೊಂದಿಗೆ(ರ) ಹೇಳಿದರು. ಈ ಮಾತನ್ನು ಕೇಳಿದ ಆ ವೃದ್ಧ ಮಾತೆ ಹೇಳಿದರು, "ಪ್ರವಾದಿವರ್ಯರೇ, ನನ್ನ ಕರುಳಕುಡಿಯನ್ನು ನನ್ನ ಮುಂದೆ ಸುಡುವುದೇ? ಅದು ನನ್ನಿಂದ ಸಹಿಸಲು ಸಾಧ್ಯವೇ?" ಪ್ರವಾದಿ(ಸ) ಹೇಳಿದರು, "ನೀವು ಅವನನ್ನು ಕ್ಷಮಿಸಿದರೆ ಅಲ್ಲಾಹನು ಅವನಿಗೆ ಕ್ಷಮೆ ನೀಡುವನು. ಅನ್ಯಥಾ ಆತನ ನಮಾಝ್, ಉಪವಾಸ, ದಾನಧರ್ಮ ಇತ್ಯಾದಿ ಸತ್ಕರ್ಮದಿಂದ ಯಾವ ಪ್ರಯೋಜನವೂ ಆತನಿಗೆ ದೊರೆಯದು."

ಕೂಡಲೇ ತಾಯಿಯ ಕೈ ಆಕಾಶಕ್ಕೇರಿತು. ಅವರು ಹೇಳಿದರು, "ಅಲ್ಲಾಹನೇ ನೀನು ಸಾಕ್ಷಿ. ಅಲ್ಲಾಹನ ಪ್ರವಾದಿಯೇ ತಾವೂ ಸಾಕ್ಷಿ, ಇಲ್ಲಿ ನೆರೆದಿರುವ ಎಲ್ಲರೂ ಸಾಕ್ಷಿ. ನಾನು ನನ್ನ ಮಗನ ಕುರಿತು ಸಂತೃಪ್ತಳಾಗಿದ್ದೇನೆ. ನನ್ನ ಮನಸ್ಸಿನಲ್ಲಿ ಅವನ ಕುರಿತು ಯಾವುದೇ ದ್ವೇಷವಿಲ್ಲ ನಾನು ಅವನನ್ನು ಕ್ಷಮಿಸಿದೆನು."

ಅನಂತರ ಪ್ರವಾದಿವರ್ಯರು(ಸ) "ಬಿಲಾಲ್‌ರನ್ನು(ರ) ಅಲ್ಕಮರ ಬಳಿಗೆ ಕಳುಹಿಸಿದರು. ಆಗ ಅಲ್ಕಮರು(ರ) ಸ್ಪಷ್ಟವಾಗಿ ಪವಿತ್ರ ವಚನವನ್ನು ಉಚ್ಚರಿಸಿ ಮರಣ ಹೊಂದಿದರು.

ಪ್ರವಾದಿವರ್ಯರೇ(ಸ) ಸ್ವತಃ ಅವರ ಜನಾಝಾ ನಮಾಝಿನ ನೇತೃತ್ವ ವಹಿಸಿದರು. ನಮಾಝಿನ ನಂತರ ಗೋರಿಯ ಹತ್ತಿರ ತನ್ನ ಅನುಯಾಯಿಗಳೊಂದಿಗೆ ಹೇಳಿದರು, "ಮುಹಾಜಿರರೇ, ಅನ್ಸಾರ್‌ಗಳೇ ತಾಯಿಯ ಕೋಪವನ್ನು ಗಳಿಸಿದವನ ಮೇಲೆ ಅಲ್ಲಾಹನ ಶಾಪವಿರುವುದು. ಅವನ ಯಾವೊಂದು ಕರ್ಮವೂ ಸ್ವೀಕಾರಾರ್ಹವಲ್ಲ."

# ಬಂಗಾರದ ಕೊಡಲಿ

**ಸ**ಲೀಮ್ ಓರ್ವ ಸಾಧು ಮನುಷ್ಯನಾಗಿದ್ದ. ದಿನಾಲೂ ಕಾಡಿಗೆ ಹೋಗಿ ಮರ ಕಡಿದು ಕಟ್ಟಿಗೆ ಮಾಡಿ ಅಂಗಡಿಯಲ್ಲಿ ಮಾರುತ್ತಿದ್ದ. ಸಲೀಮ್‌ನದ್ದು ಸರಳ ಜೀವನವಾಗಿತ್ತು. ಯಾರೊಂದಿಗೂ ದ್ವೇಷ ಇಲ್ಲ. ಅವನೊಂದಿಗೂ ಯಾರಿಗೂ ದ್ವೇಷವಿಲ್ಲ. ಯಾರನ್ನಾದರೂ ವಂಚಿಸುವುದೋ, ಉಪದ್ರವಿಸುವುದೋ ಇದು ಯಾವುದೂ ಅವನ ಜೀವನದಲ್ಲಿ ಇಲ್ಲ. ತನ್ನಂತಹ ದರಿದ್ರರಿಗೆ ಸಹಾಯ, ಸಹಕಾರ ನೀಡುತ್ತಾ ಇದ್ದನು. ಇದರಿಂದಾಗಿ ಜನರು ಅವನನ್ನು ಪ್ರೀತಿಸುತ್ತಿದ್ದರು.

ಅಂದು ಆದಿತ್ಯವಾರ. ಸಲೀಮ್ ರೂಢಿಯಂತೆ ತನ್ನ ಕೊಡಲಿಯನ್ನು ಹಿಡಿದು ಕಾಡಿಗೆ ಹೊರಟನು. ಒಂದು ವಿಶಾಲವಾದ ನದಿಯ ದಡದಲ್ಲಿತ್ತು ಆ ಕಾಡು. ಆ ನದಿಯ ತೀರದಲ್ಲಿ ಒಂದು ದೊಡ್ಡ ಮರವಿತ್ತು. ಅದರ ಕೆಲವು ರೆಂಬೆಗಳು ಒಣಗಿದ್ದವು. ಅದನ್ನು ನೋಡಿ ಸಲೀಮ್‌ನಿಗೆ ತುಂಬಾ ಸಂತೋಷವಾಯಿತು. ಅವನು ಮರ ಹತ್ತಿ ರೆಂಬೆಗಳನ್ನು ಕಡಿಯಲು ಆರಂಭಿಸಿದ.

ಥಟ್ಟನೆ ಕೊಡಲಿ ಕೈಯಿಂದ ಜಾರಿತು! 'ಗುಳುಂ' ಎನ್ನುತ್ತಾ ನದಿಗೆ ಬಿತ್ತು. ನದಿಯಲ್ಲಿ ನೀರು ತುಂಬಿ ಹರಿಯುತ್ತಾ ಇತ್ತು. ತುಂಬ ಆಳ ಕೂಡ ಇತ್ತು. ಸಲೀಮ್‌ಗಾದರೋ ಈಜಲು ಕೂಡಾ ಗೊತ್ತಿಲ್ಲ. ಬೇಸರದಿಂದ ಅಳುತ್ತಾ ಸಲೀಮ್ ನದಿಯನ್ನು ನೋಡುತ್ತಾ ಇದ್ದ.

ಸಂಜೆಯಾಯಿತು. ಕೊಡಲಿ ಇಲ್ಲ, ಕಟ್ಟಿಗೆ ಇಲ್ಲ, ಹೇಗೆ ಮನೆಗೆ ಮರಳಿ ಹೋಗುವುದು? ಮನೆಗೆ ಬೇಕಾದ ಸಾಮಾನುಗಳನ್ನು ಹೇಗೆ ಖರೀದಿಸುವುದು? ಹೊಸತೊಂದು ಕೊಡಲಿ ಬೇಕು. ಖರೀದಿಸಲು ಹಣಬೇಕು. ನನ್ನ ದುಃಖವನ್ನು ಅಲ್ಲಾಹನೊಂದಿಗಲ್ಲದೆ ಬೇರೆ ಯಾರಿಗೆ ಹೇಳಲಿ! ಆತ ಯೋಚಿಸ ತೊಡಗಿದ.

ಸಲೀಮ್ ಹೀಗೆ ಬೇಸರದಿಂದ ದೇವನೊಂದಿಗೆ ಪ್ರಾರ್ಥಿಸುತ್ತಾ ಇರುವಾಗ ಓರ್ವ ವೃದ್ಧ ಆ ದಾರಿಯಾಗಿ ಬಂದ.

"ಏನು ಸಮಾಚಾರ?" ಒಂಟಿಯಾಗಿ ಕಾಡಲ್ಲಿ ಕುಳಿತು ಅಳುವುದು ಯಾಕೆ? ಎಂದು ಪ್ರಶ್ನಿಸಿದ.

ಸಲೀಮ್ ಏನೂ ಉತ್ತರ ನೀಡಲಿಲ್ಲ. ವೃದ್ಧನ ಮೇಲೆ ದಯನೀಯ ನೋಟ ಬೀರಿದ. ಈ ವೃದ್ಧನೊಂದಿಗೆ ನಾನು ಹೇಗೆ ಹೇಳಲಿ. ಅವನಿಗೇ ನೇರವಾಗಿ ನಡೆಯಲು ಸಾಧ್ಯವಿಲ್ಲ. ಇವನೊಂದಿಗೆ ಹೇಳಿ ಏನು ಪ್ರಯೋಜನ ಎಂದು ಯೋಚಿಸಿ ಸಲೀಮ್ ಸುಮ್ಮನಾದ. ಆದರೆ ಆ ವೃದ್ಧ ಮತ್ತೆ ಮತ್ತೆ ಸಲೀಮ್‌ನೊಂದಿಗೆ ವಿಷಯವನ್ನು ಕೇಳಿದ. ಸಲೀಮ್ ನಡೆದ ಘಟನೆಯನ್ನೆಲ್ಲಾ ವಿವರಿಸಿದ.

"ಅಷ್ಟೇನಾ! ಇದಕ್ಕೆ ಯಾಕೆ ನೀನು ಇಷ್ಟು ದುಃಖಿಸುತ್ತಿರುವೆ? ಕೊಡಲಿಯನ್ನು ನಾನು ತೆಗೆದು ಕೊಡುತ್ತೇನೆ" ಎಂದು ಆ ವೃದ್ಧ ನದಿಗೆ ಹಾರಿದ.

ಸಲೀಮ್ ಆಶ್ಚರ್ಯದಿಂದ ನದಿಯನ್ನೇ ದಿಟ್ಟಿಸಿ ನೋಡಿದ. ಸ್ವಲ್ಪ ಹೊತ್ತಿನ ನಂತರ ವೃದ್ಧ ಬಂಗಾರದ ಕೊಡಲಿಯೊಂದನ್ನು ಹಿಡಿದು ಮೇಲೆ ಬಂದ. ಮಿನುಗುತ್ತಿರುವ ಕೊಡಲಿ.

"ಇದೋ ನಿನ್ನ ಕೊಡಲಿ."

ಸತ್ಯಸಂಧನಾದ ಸಲೀಮ್ ಅದನ್ನು ನೋಡಿ "ಈ ಕೊಡಲಿ ನನ್ನದಲ್ಲ. ನನ್ನದು ಸಾಮಾನ್ಯವಾದ ಒಂದು ಕಬ್ಬಿಣದ ಕೊಡಲಿ" ಎಂದ.

ಆ ವೃದ್ಧ ಆ ಕೊಡಲಿಯನ್ನು ನದಿಯ ತೀರಕ್ಕೆ ಎಸೆದು, ಪುನಃ ನದಿಯಲ್ಲಿ ಮುಳುಗಿದ. ಕೈಯಲ್ಲಿ ಕಬ್ಬಿಣದ ಕೊಡಲಿ ಹಿಡಿದು ಮೇಲೆ ಬಂದ. ಅದನ್ನು ನೋಡಿ ಸಲೀಮ್ "ಇದುವೇ ನನ್ನ ಕೊಡಲಿ ಎಂದು ಬೊಬ್ಬೆ ಹೊಡೆದ." ವೃದ್ಧ ನದಿಯ ದಡಕ್ಕೆ ಬಂದು ಸಲೀಮ್‌ನ ಕೊಡಲಿಯನ್ನು ಅವನಿಗೆ ನೀಡಿದ. ನದಿದಡದಲ್ಲಿ ಚಿನ್ನದ ಕೊಡಲಿ ಯಾರಿಗೂ ಬೇಡದ ರೀತಿಯಲ್ಲಿ ಬಿದ್ದಿತ್ತು. ಅದನ್ನೂ ತೆಗೆದು ಆ ವೃದ್ಧ ಸಲೀಮ್‌ನಿಗೆ ನೀಡುತ್ತಾ,

"ಇದೋ ಈ ಬಂಗಾರದ ಕೊಡಲಿ ತೆಗೆದು ಕೋ. ನಿನ್ನ ಸತ್ಯಸಂಧತೆಗೆ ನನ್ನಿಂದ ಈ ಉಡುಗೊರೆ." ಎಂದು ಹೇಳಿದ.

ನಂತರ ಆ ವೃದ್ಧ ಅಲ್ಲಿ ನಿಲ್ಲದೆ ವೇಗವಾಗಿ ನಡೆದ.

ಸಲೀಮ್‌ನಿಗೆ ಬಂಗಾರದ ಕೊಡಲಿ ಸಿಕ್ಕಿದ ವಿಷಯ ಊರಲ್ಲಿ ಸುದ್ದಿಯಾಯಿತು. ಎಲ್ಲರೂ ಸಂತೋಷಪಟ್ಟರು.

ಆದರೆ ಸಲೀಮ್‌ನ ನೆರೆಯಲ್ಲಿ ಸಮೀರ್ ಎಂಬ ವ್ಯಕ್ತಿ ಇದ್ದ. ಅವನು ತುಂಬಾ ಅಸೂಯೆ ಪಟ್ಟ. ನನಗೂ ಚಿನ್ನದ ಕೊಡಲಿ ಸಿಗಬೇಕೆಂದು ಆಸೆ ಪಟ್ಟ. ಸಮೀರ್ ಒಂದು ಕೊಡಲಿಯನ್ನು ಹಿಡಿದು ಕಾಡಿಗೆ ನಡೆದ. ಮರಕ್ಕೆ ಹತ್ತಿ ರೆಂಬೆಗಳನ್ನು ಕಡಿಯಲು ಆರಂಭಿಸಿದ. ಎರಡು ರೆಂಬೆಗಳನ್ನು ಕಡಿದು ಕೊಡಲಿಯನ್ನು ನದಿಗೆ

ಬಿಸಾಡಿ, "ನನ್ನ ಕೊಡಲಿ! ನನ್ನ ಕೊಡಲಿ!" ಎಂದು ಬೊಬ್ಬೆ ಹಾಕಿದ. ಸ್ವಲ್ಪ ಹೊತ್ತಿನ ನಂತರ ಅದೇ ವೃದ್ಧ ಅಲ್ಲಿಗೆ ಬಂದ.

"ಏನು ಸಮಾಚಾರ?"

"ನನ್ನ ಕೊಡಲಿ ನದಿಗೆ ಬಿತ್ತು!" ಮೊಸಳೆ ಕಣ್ಣೀರಿಡುತ್ತಾ ಸಮೀರ್ ಹೇಳಿದ.

"ಚಿಂತಿಲ್ಲ, ನಾನು ತೆಗೆದು ಕೊಡುವೆನು."

ವೃದ್ಧ ನದಿಗೆ ಹಾರಿ, ಚಿನ್ನದ ಕೊಡಲಿಯನ್ನು ಹಿಡಿದು ಮೇಲೆ ಬರುವುದನ್ನು ಸಮೀರ್ ಆಶ್ಚರ್ಯದಿಂದ ನೋಡಿದ.

"ಇದು ನಿನ್ನ ಕೊಡಲಿಯಾ?" ವೃದ್ಧ ಕೊಡಲಿಯನ್ನು ಎತ್ತಿ ಹಿಡಿದು ಕೇಳಿದ.

"ಹೌದು! ಹೌದು! ಇದುವೇ ನನ್ನ ಕೊಡಲಿ" ಸಮೀರ್ ಸಂತೋಷದೊಂದಿಗೆ ಹೇಳಿದ.

"ಹಾಗಾದರೆ ಇದೋ ತೆಗೆದು ಕೋ" ಎಂದು ವೃದ್ಧ ನದಿಯಲ್ಲಿ ನಿಂತು ಕೊಡಲಿಯನ್ನು ದಡಕ್ಕೆ ತೋರಿಸಿದ.

ದಡದಲ್ಲಿದ್ದ ಸಮೀರ್ ಕೊಡಲಿ ತೆಗೆಯಲು ಕೈ ಚಾಚಿದ. ಎಟಕುವುದಿಲ್ಲ... ಮರದ ರೆಂಬೆಯನ್ನು ಹಿಡಿದು ಸ್ವಲ್ಪ ಮುಂದೆ ಹೋದ... ಸಿಗಲಿಲ್ಲ. ಇನ್ನೂ ಮುಂದೆ ಹೋದ... ರೆಂಬೆ ಮುರಿದು ನದಿಗೆ ಬಿದ್ದ.

ನೀರಲ್ಲಿ ಬಿದ್ದ ಸಮೀರ್‌ನನ್ನು ಮತ್ತೆ ಯಾರೂ ನೋಡಲಿಲ್ಲ.

ನೋಡಿ! ದುರಾಸೆಯ ಫಲ!

# ಉದಾರಿ ಸಾಲಗಾರ

ಖಲೀಫ ಮಅ್‌ಮೂನರ ಆಡಳಿತ ಕಾಲ. ಅವರ ಅರಮನೆಯಲ್ಲಿ ಅಸ್‌ಮೈ ಎಂಬ ಸೇವಕನಿದ್ದ. ಖಲೀಫರಿಗೆ ಬೇಕಾದ ಕೆಲಸಗಳನ್ನು ಮಾಡುವುದು, ಉಪದೇಶ ನೀಡುವುದು, ಹಾಸ್ಯ ಹೇಳಿ ನಗಿಸುವುದು ಅಸ್‌ಮೈಯ ಕೆಲಸವಾಗಿತ್ತು.

ಅಸ್‌ಮೈ ಹೇಳುತ್ತಾನೆ- "ಒಂದು ದಿನ ನನಗೆ ಹಣದ ತುಂಬಾ ಅಗತ್ಯ ಬಂತು. ಖಲೀಫರೊಂದಿಗೆ ಕೇಳಲು ಒಂದು ರೀತಿಯ ಮುಜುಗರ. ಹಲವು ಸಂದರ್ಭದಲ್ಲಿ ಖಲೀಫರು ಧಾರಾಳವಾಗಿ ಹಣ ನೀಡಿದ್ದಾರೆ. ಸಾವಿರ ಲೆಕ್ಕದಲ್ಲಿ ದೀನಾರ್, ಚಿನ್ನದ ನಾಣ್ಯಗಳು, ಇಷ್ಟೆಲ್ಲಾ ನೀಡಿಯೂ ನನ್ನ ಆವಶ್ಯಕತೆಗಳು ಇನ್ನೂ ಬಾಕಿಯಾಗಿವೆ. ಹೀಗಿರುವಾಗ ನಾನು ಖಲೀಫರೊಂದಿಗೆ ಹೇಗೆ ಹಣ ಕೇಳಲಿ? ಹೇಗಿದ್ದರೂ ನನಗೆ ಈಗ ಹಣದ ಅಗತ್ಯ ಇದೆ. ಯಾರೊಂದಿಗೆ ಕೇಳಲಿ?"

ಆ ಊರಿನಲ್ಲಿ ಒಬ್ಬ ಹೆಸರುವಾಸಿಯಾದ ಧರ್ಮನಿಷ್ಠ ವ್ಯಕ್ತಿ ಇದ್ದನು. ನನ್ನ ಅಗತ್ಯಗಳನ್ನು ಹೇಳಲಿಕ್ಕೋಸ್ಕರ ಅವರ ಮನೆಗೆ ಹೋದೆ. ಇದಕ್ಕಿಂತ ಮೊದಲು ಹಲವು ಬಾರಿ ನಾನು ಹೋಗಿದ್ದೆ. ಅವರು ನನಗೆ ಹಲವು ಸಲ ಸಹಾಯ ಮಾಡಿದ್ದರು.

ಅವರ ಮನೆಗೆ ತಲಪಿದಾಗ ಬಾಗಿಲ ಬಳಿ ಕಾವಲುಗಾರನಿದ್ದನು. ನಾನು ಒಳಗೆ ಪ್ರವೇಶಿಸಲು ಹೊರಟಾಗ ಆ ಕಾವಲುಗಾರ ನನ್ನನ್ನು ತಡೆದು, ನನ್ನೊಂದಿಗೆ ಕಠೋರವಾಗಿ ವರ್ತಿಸಿದನು. ನಿಮ್ಮಂತಹವರನ್ನು ತಡೆಯಲಿಕ್ಕಾಗಿ ನನ್ನನ್ನು ಇಲ್ಲಿ ನಿಲ್ಲಿಸಲಾಗಿದೆ ಎಂದನು.

ಏನು ಮಾಡುವುದೆಂದು ಆಲೋಚಿಸಿದೆ. ನಂತರ ಒಂದು ಕಾಗದದ ತುಂಡು ತೆಗೆದು ಅದರಲ್ಲಿ ಈ ರೀತಿ ಬರೆದೆ.

"ಉದಾರಿಯ ಬಾಗಿಲ ಬಳಿ ಕಾವಲುಗಾರ! ಜಿಪುಣನಿಗಿಂತ ಉದಾರಿಗೆ ಯಾವ ಶ್ರೇಷ್ಠತೆ?" ಅದನ್ನು ಕಾವಲುಗಾರನಿಗೆ ನೀಡಿ ಅವರಿಗೆ ಕೊಡಲಿಕ್ಕೆ ಹೇಳಿದೆ. ಕಾವಲುಗಾರನು ಅದನ್ನು ತೆಗೆದುಕೊಂಡು ಒಳಗೆ ಹೋದನು. ಹಿಂದಿರುಗಿ ಬರುವಾಗ ಒಂದು ಚೀಲ ಮತ್ತು ನಾನು ಬರೆದ ಪತ್ರವಿತ್ತು. ಅದರ ಹಿಂಬದಿಯಲ್ಲಿ ಈ ರೀತಿ ಬರೆದಿತ್ತು.

"ಉದಾರಿಯು ದರಿದ್ರನಾದರೆ ಸಾಲಗಾರರಿಂದ ಅವನಿಗೆ ಕಾವಲು ಬೇಕಾಗುವುದು."

ನನಗೆ ಕಾವಲು ನಿಲ್ಲಿಸಿರುವುದು ಯಾಕೆಂಬ ವಿಷಯ ಮನವರಿಕೆಯಾಯಿತು. ನಾನು ಆ ಚೀಲ ಬಿಚ್ಚಿ ನೋಡಿದೆ. ಅದರಲ್ಲಿ 500 ದೀನಾರ್ ಮತ್ತು ಫಳಫಳ ಹೊಳೆಯುವ ಕೆಲವು ಚಿನ್ನದ ನಾಣ್ಯಗಳಿದ್ದುವು! ಸಾಲಗಾರನಿಂದ ಅಡಗಿ ಕುಳಿತು ಕೊಳ್ಳುವ ವ್ಯಕ್ತಿ ಇಷ್ಟು ದೊಡ್ಡ ಮೊತ್ತವನ್ನು ದಾನ ಮಾಡುವುದೇ? ಎಂದು ಆಶ್ಚರ್ಯ ಚಕಿತನಾದೆ.

ನಾನು ಅಲ್ಲಿಂದ ಖಲೀಫ ಮಅ್‌ಮೂನರ ಬಳಿಗೆ ಹೋದೆ. ನನ್ನನ್ನು ಕಂಡ ಕೂಡಲೇ ಕುಶಲೋಪರಿ ಕೇಳಿದರು.

"ಅಸ್‌ಮೈ ಎಲ್ಲಿಂದ ಬಂದೆ?"

"ಅಮಿರುಲ್ ಮುಅ್‌ಮಿನೀನ್! ನಾನು ಒಬ್ಬ ದೊಡ್ಡ ಉದಾರಿಯ ಬಳಿಯಿಂದ ಬಂದೆ."

"ಯಾರದು?"

ನಾನು ನಡೆದ ಘಟನೆಯನ್ನು ವಿವರಿಸಿದೆ. ನನಗೆ ದೊರೆತ ಬಂಗಾರದ ನಾಣ್ಯಗಳನ್ನು ಖಲೀಫರಿಗೆ ತೋರಿಸಿದೆ. ಬಂಗಾರದ ನಾಣ್ಯಗಳನ್ನು ನೋಡಿ ಖಲೀಫರ ಮುಖಭಾವ ಬದಲಾಯಿತು. ಅದು ಕೆಂಪು ಕಿತ್ತಳೆ ಹಣ್ಣಿನಂತಾಯಿತು.

"ಇದು ಖಜಾನೆಯ ಚೀಲವಲ್ಲವೇ?" ಎಂದು ಖಲೀಫ ಪ್ರಶ್ನಿಸಿದರು. ನೀವು ಹೋಗಿ ಆ ವ್ಯಕ್ತಿಯನ್ನು ನನ್ನ ಬಳಿಗೆ ಕರೆದು ಕೊಂಡು ಬನ್ನಿ ಎಂದು ಆಜ್ಞಾಪಿಸಿದರು.

ನನಗೆ ಸಹಾಯ ಮಾಡಿದವರನ್ನು ನಾನು ಬಂಧಿಸಿ ತರುವುದು ಸಾಧ್ಯವಾಗದು ಎಂದು ಅಸಹಾಯಕತೆಯನ್ನು ಅಸ್‌ಮ್ಯೆ ತೋಡಿಕೊಂಡನು.

ಆದರೆ ಖಲೀಫರು ಅವರನ್ನು ತನ್ನ ಮುಂದೆ ಹಾಜರು ಪಡಿಸಲೇಬೇಕೆಂದು ಪಟ್ಟು ಹಿಡಿದರು.

ಇದನ್ನು ಕೇಳಿ ಅಸ್‌ಮ್ಯೆ ಪೊಲೀಸರೊಂದಿಗೆ ಆ ವ್ಯಕ್ತಿಯನ್ನು ಕರೆದು ಕೊಂಡು ಬರಲು ಆಜ್ಞಾಪಿಸಿದರು.

ಅಸ್‌ಮ್ಯೆ ಆ ಸಂದರ್ಭದಲ್ಲಿ ಖಲೀಫರೊಂದಿಗೆ, "ಅಮೀರುಲ್ ಮುಅ್‌ಮಿನೀನ್! ನೀವು ಆ ವ್ಯಕ್ತಿಯನ್ನು ಗದರಿಸಿ ತರಿಸುವುದು ಬೇಡ. ಇದು ತಮ್ಮ ದೊಡ್ಡಸ್ತಿಕೆಗೆ ತಕ್ಕುದಲ್ಲ" ಎಂದನು.

ಆಗ ಖಲೀಫ ಆಲೋಚಿಸ ತೊಡಗಿದರು. ನಂತರ ತನ್ನ ಸೇವಕನೊಬ್ಬನನ್ನು ಕರೆದು ಆ ವ್ಯಕ್ತಿಯನ್ನು ಉತ್ತಮ ರೀತಿಯಲ್ಲಿ ಬರಮಾಡಿ ಕೊಳ್ಳಬೇಕೆಂದು ತಿಳಿಸಿದರು.

ಆ ವ್ಯಕ್ತಿ ಅರಮನೆಗೆ ಬಂದಾಗ "ನೀವಲ್ಲವೇ ನಿನ್ನೆ ಇಲ್ಲಿಗೆ ಬಂದದ್ದು" ಎಂದು ಖಲೀಫರು ಪ್ರಶ್ನಿಸಿದರು.

"ಹೌದು, ಅಮೀರುಲ್ ಮುಅ್‌ಮಿನೀನ್!"

"ಸಾಲದ ಹೊರೆಯಿಂದ ಹೊರಗಿಳಿದು ನಡೆಯಲಿಕ್ಕೆ ಆಗುವುದಿಲ್ಲವೆಂದು ನೀವು ಹೇಳಿದ್ದಿರಲ್ಲವೇ?"

"ಹೌದು, ಅಮೀರುಲ್ ಮುಅ್‌ಮಿನೀನ್! ಅದು, ನಿಜ."

"ಹಾಗಾದರೆ ನಾನು ಕೊಟ್ಟ ಹಣವನ್ನು ನೀವು ಏನು ಮಾಡಿದಿರಿ?"

"ಅಮೀರುಲ್ ಮುಅ್‌ಮಿನೀನ್! ನಾನು ನನ್ನ ಅಗತ್ಯಗಳಿಗಾಗಿ ತಮ್ಮ ಬಳಿ ಬಂದೆ. ಆಗ ತಾವು ನನ್ನನ್ನು ಬರಿಗೈಯಲ್ಲಿ ಕಳುಹಿಸಲಿಲ್ಲ. ಅದೇ ರೀತಿ ಒಬ್ಬ ವ್ಯಕ್ತಿ ತನ್ನ ಅವಶ್ಯಕತೆಗಳಿಗಾಗಿ ನನ್ನ ಬಳಿ ಹಣ ಕೇಳಲು ಬಂದ. ನಾನು ನೀವು ಮಾಡಿದ ಹಾಗೆ ಮಾಡಬಾರದೇ?

ಇದನ್ನು ಕೇಳಿ ಖಲೀಫ ಮಅ್‌ಮೂನ್ ನಕ್ಕು ಬಿಟ್ಟರು. ಆ ದಿನದಿಂದ ಆ ವ್ಯಕ್ತಿಯನ್ನು ವಿಶೇಷ ಸ್ಥಾನದೊಂದಿಗೆ ಖಲೀಫರು ತನ್ನ ಆಸ್ಥಾನದಲ್ಲಿ ಇರಿಸಿಕೊಂಡರು.

# ಸತ್ಯಸಂಧ ಕೃಷಿಕ

**ಬ**ನೀ ಇಸ್ರಾಈಲ್ ಸಮುದಾಯದಲ್ಲಿ ನಡೆದ ಘಟನೆ.

ಒಂದು ಚಿಕ್ಕಗ್ರಾಮ. ಅಲ್ಲಿ ಧಾರಾಳ ಕೃಷಿಕರಿದ್ದರು. ಆ ಗ್ರಾಮದ ಒಬ್ಬ ಕೃಷಿಕ ಒಮ್ಮೆ ಬಹಳ ಸಂಕಷ್ಟಕ್ಕೊಳಗಾದ. ಗದ್ದೆಯಲ್ಲಿ ಬೀಜ ಬಿತ್ತುವ ಸಮಯವಾಯಿತು. ಬೀಜ ಖರೀದಿಸಲು ಕೈಯಲ್ಲಿ ಹಣವಿಲ್ಲ. ಸಾಲ ಕೇಳ ಬೇಕೆಂದರೆ ಯಾರ ಕೈಯಲ್ಲೂ ಹಣವಿಲ್ಲ. ಏನು ಮಾಡುವುದು? ಕೃಷಿಕ ಚಿಂತೆಗೀಡಾದ.

ಆತನಿಗೆ ಸಮುದ್ರದಾಚೆಯಿರುವ ಒಬ್ಬ ಶ್ರೀಮಂತ ವ್ಯಾಪಾರಿಯ ಪರಿಚಯವಿತ್ತು. ಅವನು ದೋಣಿ ಹತ್ತಿ ಆ ವ್ಯಾಪಾರಿಯ ಹತ್ತಿರ ಹೋಗಿ ಸಾವಿರ ದೀನಾರ್ ಸಾಲ ಕೇಳಿದ. ವ್ಯಾಪಾರಿ ಹೇಳಿದನು,

"ಸಾಲ ನೀಡುವೆ, ಆದರೆ ಸಾಕ್ಷಿ ಬೇಕು."

ಕೃಷಿಕ ಹೇಳಿದ "ಅಲ್ಲಾಹನೇ ಸಾಕ್ಷಿ."

"ಹಾಗಾದರೆ ಜಾಮಿನು ಬೇಕು."

"ಸೃಷ್ಟಿಕರ್ತನೇ ನನಗೆ ಜಾಮಿನು."

"ಸರಿ, ಹಾಗೆಯೇ ಆಗಲಿ" ವ್ಯಾಪಾರಿ ಒಪ್ಪಿದನು.

ಕೃಷಿಕ ಒಂದು ಅವಧಿ ಹೇಳಿದನು. ಅದನ್ನು ಒಪ್ಪಿ ವ್ಯಾಪಾರಿ ಹಣವನ್ನು ನೀಡಿದನು. ಕೃಷಿಕ ಬಹಳ ಒಳ್ಳೆಯ ವ್ಯಕ್ತಿ. ಅಲ್ಲಾಹನ ಭಯವಿರುವ ಓರ್ವ ಸತ್ಯಸಂಧನಾಗಿದ್ದನು. ದ್ರೋಹವೆಸಗುವುದೋ, ಸುಳ್ಳು ಹೇಳುವುದೋ ಇಂತಹ ಯಾವ ದುರ್ಗುಣವೂ ಅವನಲ್ಲಿರಲಿಲ್ಲ. ಸಮಯಕ್ಕೆ ಸರಿಯಾಗಿಯೇ ಸಾಲವನ್ನು ಮರುಪಾವತಿ ಮಾಡಲು ಕೃಷಿಕ ಸಿದ್ಧನಾದನು.

ವ್ಯಾಪಾರಿಗೆ ಸಾಲ ಮರುಪಾವತಿಸಲು ಸಮುದ್ರ ದಾಟಿ ಹೋಗಬೇಕಾಗಿತ್ತು. ಕೃಷಿಕ ದೋಣಿಯನ್ನು ಕಾದು ಸಮುದ್ರ ತೀರದಲ್ಲಿ ಕುಳಿತು ಕೊಂಡ. ಸಂಜೆಯಾದರೂ ದೋಣಿ ಸಿಗಲಿಲ್ಲ. ಕೃಷಿಕನಿಗೆ ತುಂಬಾ ಬೇಸರವಾಯಿತು. ಅಲ್ಲಾಹನನ್ನು ಸಾಕ್ಷಿಯಾಗಿಸಿ ಸಾಲವನ್ನು ತೆಗೆದಿದ್ದೇನೆ. ಸಮಯಕ್ಕೆ ತಪ್ಪಿ ಹೋಗುವುದು ಸರಿಯಲ್ಲ. ಈಗ ಏನು ದಾರಿ? ಕೃಷಿಕ ಚಿಂತೆಗೀಡಾದ.

ಸಮುದ್ರಕ್ಕೆ ಕಣ್ಣೋಡಿಸಿ ಆಲೋಚನೆಯಲ್ಲಿ ಮಗ್ನನಾಗಿರುವಾಗ ಒಂದು ಮರದ ತುಂಡು ಸಮುದ್ರದ ಅಲೆಯೊಂದಿಗೆ ದಡಕ್ಕೆ ಅಪ್ಪಳಿಸಿತು.

ಕೃಷಿಕನಿಗೆ ಒಂದು ಹೊಸ ಉಪಾಯ ತೋಚಿತು. ಅವನು ಆ ಮರದ ತುಂಡನ್ನು ತೆಗೆದು ಒಂದು ಭಾಗವನ್ನು ಸ್ವಲ್ಪ ಮುರಿದನು. ವ್ಯಾಪಾರಿಯ ಸಾಲದ ಹಣವನ್ನು ಮತ್ತು ಒಂದು ಪತ್ರವನ್ನು ಒಂದು ಚೀಲದಲ್ಲಿ ಕಟ್ಟಿ ಆ ಮರಕ್ಕೆ ಭದ್ರವಾಗಿ ಕಟ್ಟಿ ನಂತರ ಆಕಾಶದೆಡೆಗೆ ಕೈ ಜೋಡಿಸಿ ಪ್ರಾರ್ಥನೆ ಮಾಡಿದ.

"ಓ ಸೃಷ್ಟಿಕರ್ತನೇ! ನಾನು ಸಮುದ್ರದಾಚೆಯಿರುವ ನನ್ನ ಸ್ನೇಹಿತನೊಂದಿಗೆ ಸಾವಿರ ದೀನಾರ್ ಸಾಲವಾಗಿ ಕೇಳಿದೆ. ಅವನು ಸಾಕ್ಷಿ ಕೇಳಿದಾಗ ನಿನ್ನನ್ನು ಸಾಕ್ಷಿಯಾಗಿಸಿದೆ. ನಂತರ ಜಾಮೀನು ಕೇಳಿದಾಗ ನಿನ್ನನ್ನೇ ಜಾಮೀನಾಗಿಸಿ ಹಣವನ್ನು ಪಡೆದಿದ್ದೇನೆ. ಈಗ ಹಣ ಮರುಪಾವತಿ ಮಾಡುವ ಸಮಯವಾಯಿತು. ಆದರೆ ನನ್ನ ಮುಂದೆ ಸಮುದ್ರ ದಾಟುವ ಯಾವ ಮಾರ್ಗವೂ ಇಲ್ಲ. ಆದುದರಿಂದ ನಿನ್ನನ್ನು ಸಾಕ್ಷಿಯಾಗಿಸಿ ಪಡೆದ ಹಣವನ್ನು ಅದರ ಒಡೆಯನಿಗೆ ತಲಪಿಸುವ ಹೊಣೆ ನಿನ್ನದು."

ತದನಂತರ ಮರದ ತುಂಡಿಗೆ ಹಣದ ಚೀಲವನ್ನು ಕಟ್ಟಿ ಸಮುದ್ರಕ್ಕೆಸೆದ. ಆ ಮರದ ತುಂಡು ಸಮುದ್ರದ ಅಲೆಯೊಂದಿಗೆ ತೇಲುತ್ತಾ ಕಣ್ಮರೆಯಾಯಿತು.

ಇಷ್ಟೆಲ್ಲಾ ಮಾಡಿಯೂ ಕೃಷಿಕನ ಮನಸ್ಸಿಗೆ ಸಮಾಧಾನವಾಗಲಿಲ್ಲ. ಆಗಾಗ ಹಣವನ್ನು ತೆಗೆದು ಕೊಂಡು ಸಮುದ್ರ ತೀರಕ್ಕೆ ಬರುತ್ತಾ ಇದ್ದ.

ಕೃಷಿಕನಿಗೆ ಬಹಳ ದಿನಗಳ ನಂತರ ದೋಣಿ ಸಿಕ್ಕಿ, ಸಮುದ್ರದಾಚೆ ಹೊರಟು ಸ್ನೇಹಿತನ ಮನೆಗೆ ತಲಪಿದ. ಮನಸ್ಸಿಗೆ ನೆಮ್ಮದಿಯಿಲ್ಲ. ಏನು ಹೇಳುವುದು? ಅಲ್ಲಾಹನನ್ನು ಸಾಕ್ಷಿಯಾಗಿಸಿ ಸಾಲವನ್ನು ಪಡೆದದ್ದು. ಆದರೂ ಮರುಪಾವತಿಗೆ ಇಷ್ಟು ದಿನ...? ಸತ್ಯ ಹೇಳಿದರೆ ವ್ಯಾಪಾರಿ ನಂಬುವನೇ? ಅಥವಾ ಮೋಸ ಮಾಡಿದ ಎಂದು ಭಾವಿಸುವನೇ? ಹೀಗೆ ಹಲವು ಪ್ರಶ್ನೆಗಳು ಅವನ ಮನಸ್ಸಿನಲ್ಲಿ ಮೂಡಿತು. ಆದರೆ ವ್ಯಾಪಾರಿಯೂ ಗೌರವದೊಂದಿಗೆ ಕೃಷಿಕನನ್ನು ಸ್ವಾಗತಿಸಿದ. ಕೃಷಿಕನಿಗೆ ಸಮಾಧಾನವಾಯಿತು. "ಸಹೋದರಾ, ಮೊದಲು ಕ್ಷಮೆ ಕೇಳುತ್ತೇನೆ. ಸಮಯಕ್ಕೆ ಸರಿಯಾಗಿ ಹಣ ಪಾವತಿಸಲು ಸಾಧ್ಯವಾಗಲಿಲ್ಲ. ತುಂಬಾ ಪ್ರಯತ್ನ ಪಟ್ಟೆ. ಆದರೆ ಇವತ್ತೇ ನನಗೆ ದೋಣಿ ಸಿಕ್ಕಿದ್ದು." ಕೃಷಿಕನ ಮುಖ ನೋಡಿ ವ್ಯಾಪಾರಿಯೂ ನಗುಬೀರಿದ.

"ನನ್ನ ಮಾತಿನ ಮೇಲೆ ನಂಬಿಕೆ ಬರುವುದಿಲ್ಲವೇ?" ಕೃಷಿಕ ಕೇಳಿದ.

"ಹಾಗಲ್ಲ! ನಂಬಿಕೆಯಾದ ಕಾರಣ ನಗು ಬೀರಿದ್ದು."

"ಹಾಗಾದರೆ ನಿಮ್ಮ ಹಣವನ್ನು ತೆಗೆದು ಕೊಳ್ಳಿ" ಎಂದು ಹಣದ ಚೀಲವನ್ನು ವ್ಯಾಪಾರಿಯ ಮುಂದೆ ಇಟ್ಟನು.

"ನನ್ನ ಹಣ ಸಮಯಕ್ಕೆ ಸರಿಯಾಗಿ ನನಗೆ ತಲಪಿದೆ."

"ಹಣ ಸಿಕ್ಕಿತೋ? ಎಲ್ಲಿಂದ?"

"ನೀವು ಒಪ್ಪಿಸಿದ ಅಮಾನತ್ ಅಲ್ಲಾಹನು ನನಗೆ ಮುಟ್ಟಿಸಿದನು."

ಕೃಷಿಕನ ಆಶ್ಚರ್ಯಕ್ಕೆ ಪಾರವೇ ಇರಲಿಲ್ಲ. ಅರಳಿದ ಕಣ್ಣುಗಳೊಂದಿಗೆ ಆತ ವ್ಯಾಪಾರಿಯನ್ನು ನೋಡಿದ. ಆತ ಈ ರೀತಿ ಹೇಳಿದ.

"ನಾನು ಆ ದಿನ ಸಮುದ್ರ ತೀರಕ್ಕೆ ಹೋಗಿದ್ದೆ. ನನಗೆ ಹಣದ ಅಗತ್ಯವಿತ್ತು. ನೀವು ಬರುತ್ತೀರಾ ಎಂದು ನೋಡಿದೆ. ನನಗೆ ಆ ದಿನ ತುಂಬಾ ಮೀನು ಸಿಕ್ಕಿತು. ದೋಣಿ ಕಾಣದಿರುವಾಗ ನೀವು ಬರುವುದಿಲ್ಲ ಎಂದು ಭಾವಿಸಿದೆ. ಸಂಜೆಯಾಯಿತು. ನಾನು ಮನೆಗೆ ಮರಳಬೇಕೆಂದೆನಿಸಿದಾಗ ಥಟ್ಟನೆ ಒಂದು ದೊಡ್ಡ ಅಲೆ ಬಂತು. ಜೊತೆಗೆ ಒಂದು ದೊಡ್ಡ ಮರದ ತುಂಡು ನನ್ನ ಮುಂದೆ ಬಂದು ಬಿತ್ತು. ನನಗೆ ಹಗ್ಗದ ಅಗತ್ಯ ಇತ್ತು. ನಾನು ಆ ಹಗ್ಗವನ್ನು ಬಿಚ್ಚಿದೆ. ಆದರೆ! ಆಶ್ಚರ್ಯ! ನೀವು ಕಳಿಸಿದ ಹಣ ಮತ್ತು ಪತ್ರ ಸಿಕ್ಕಿತು.

ಕೃಷಿಕನ ಸಂತೋಷಕ್ಕೆ ಪಾರವೇ ಇರಲಿಲ್ಲ. ಆತ ಕೃತಜ್ಞತೆಯೊಂದಿಗೆ ಅಲ್ಲಾಹನ ಮುಂದೆ ಸಾಷ್ಟಾಂಗವೆರಗಿದ.

# ಜಿಪುಣ ವ್ಯಾಪಾರಿ

**ಒಂದು** ಊರಿನಲ್ಲಿ ಒಬ್ಬ ದೊಡ್ಡ ವ್ಯಾಪಾರಿ ಇದ್ದ. ಅವನ ಬಳಿ ಧಾರಾಳ ಸಂಪತ್ತಿತ್ತು. ಆದರೆ ಆತ ತುಂಬಾ ಜಿಪುಣ. ಯಾರಿಗೂ ಉಪಕಾರ ಮಾಡುವವನಲ್ಲ. ಸ್ವಂತ ಅಗತ್ಯಗಳಿಗೂ ಕೂಡಾ ಜಿಪುಣತೆ ತೋರುತ್ತಿದ್ದ. ಒಳ್ಳೆಯ ಬಟ್ಟೆ ಧರಿಸುತ್ತಿರಲಿಲ್ಲ. ಉತ್ತಮ ಆಹಾರ ಸೇವಿಸುತ್ತಿರಲಿಲ್ಲ. ಕೇವಲ ಹಣವನ್ನು ಸಂಗ್ರಹಿಸುವ ಧನ ಪೂಜಕ. ಪೆಟ್ಟಿಗೆಯಲ್ಲಿ ಇಟ್ಟ ಹಣವನ್ನು ಒಮ್ಮೆಯೂ ಆತ ಖರ್ಚು ಮಾಡುತ್ತಿರಲಿಲ್ಲ. ಅದನ್ನು ಎಣಿಸಿ ಎಣಿಸಿ ಆನಂದಿಸುತ್ತಿದ್ದ.

ಹೀಗೆ ಒಂದು ದಿನ ವ್ಯಾಪಾರದಲ್ಲಿ ಬಹಳ ನಷ್ಟ ಉಂಟಾಯಿತು. ಇನ್ನು ಪೆಟ್ಟಿಗೆಯಿಂದ ಹಣ ತೆಗೆಯದೆ ನಿರ್ವಾಹವಿಲ್ಲವೆಂದು ಮನಗಂಡರೂ ಅದಕ್ಕೆ ಆ ಜಿಪುಣ ತಯಾರಾಗಲಿಲ್ಲ.

"ಈ ನಷ್ಟ ಬರುವಂತಹ ವ್ಯಾಪಾರವೇ ಬೇಡ" ಎಂದು ಆತ ಆಲೋಚಿಸಿದ.

"ಅದನ್ನು ಮಾರಿ ಸಿಗುವಂತಹ ಹಣದಿಂದ ತೋಟವನ್ನು ಖರೀದಿಸೋಣ. ಹಾಗಾದರೆ ಪರಿಶ್ರಮ ಕಡಿಮೆಯಾಗಬಹುದು. ಲಾಭ ಕೂಡ ಸಿಗಬಹುದು. ವ್ಯಾಪಾರದ ಹಾಗೆ ನಷ್ಟ ಬರಲಿಕ್ಕಿಲ್ಲ..."

ಹೀಗೆ ವ್ಯಾಪಾರದ ಸರಕನ್ನೆಲ್ಲಾ ಮಾರಿ ತೋಟವನ್ನು ಖರೀದಿಸಿದ. ಪ್ರತೀ ತಿಂಗಳು ಒಳ್ಳೆಯ ಆದಾಯ ಬರುತ್ತಿತ್ತು! ಜಿಪುಣನು ಸಂತೋಷದೊಂದಿಗೆ ಸಿಕ್ಕಿದ ಹಣವನ್ನೆಲ್ಲಾ ಪೆಟ್ಟಿಗೆಯಲ್ಲಿ ಸಂಗ್ರಹಿಸಿಟ್ಟ. ಆದರೂ ಒಂದು ಚಿಂತೆ ಅವನನ್ನು ಕಾಡುತ್ತಿತ್ತು. ಅದೇನೆಂದರೆ ಕೆಲಸದಾಳುಗಳಿಗೆ ಕೂಲಿ ಕೊಡಬೇಕಾಗಿತ್ತು. ಅದನ್ನು ಇಲ್ಲವಾಗಿಸಲು ಏನು ಮಾರ್ಗ! ಜಿಪುಣನು ನಿರಂತರ ಆಲೋಚಿಸುತ್ತಲೇ ಇದ್ದ. ತಾನೇ ಸ್ವತಃ ಕೆಲಸ ಮಾಡೋಣವೆಂದರೆ ಆರೋಗ್ಯ ಚೆನ್ನಾಗಿಲ್ಲ. ಮಕ್ಕಳು ಕೂಡಾ ಇಲ್ಲ. ಹೀಗೆ ವಿವಿಧ ರೀತಿಯಲ್ಲಿ ಜಿಪುಣ ಆಲೋಚಿಸಿದ.

ಒಂದು ಸಂದರ್ಭದಲ್ಲಿ ಊರಿಗೆ ಬರಗಾಲ ಬಂತು. ಮಳೆ ಇಲ್ಲ. ಬಿಸಿಲಿನ ತ[illegible]. ಹೀಗೆ ಊರಲ್ಲಿ ಕೃಷಿ ನಾಶವಾಗಲು ಆರಂಭವಾಯಿತು. ಜನರು ಮಳೆಗಾಗಿ ದೇವನೊಂದಿಗೆ ಪ್ರಾರ್ಥನೆ ಮಾಡುತ್ತಾ ಇದ್ದರು. ಅವರ ಮಧ್ಯೆ ಪ್ರಾರ್ಥನೆಯಲ್ಲಿ ಜಿಪು[illegible] ಇದ್ದ.

ಬರಗಾಲದಿಂದಾಗಿ ತೋಟದ ಆದಾಯ ಕಡಿಮೆಯಾಯಿತು. ಜಿಪುಣನಿಗೆ ಹೆದರಿಕೆಯಾಯಿತು. ನೀರು, ಗೊಬ್ಬರ ಹಾಕಿ ತೋಟವನ್ನು ಸರಿಯಾಗಿ ನೋಡಿಕೊಳ್ಳಬೇಕು. ಇಲ್ಲವಾದರೆ ತೋಟ ಸಂಪೂರ್ಣವಾಗಿ ನಾಶವಾಗಬಹುದು. ಹಣ ಖರ್ಚು ಮಾಡಲಿಕ್ಕಾದರೂ ಮನ ಒಪ್ಪುವುದಿಲ್ಲ. ಖರ್ಚು ಮಾಡದೆ ನಿರ್ವಾಹವಿಲ್ಲ. ಏನು ಮಾಡುವುದು? ಆತ ಚಿಂತೆಗೀಡಾದ.

ಕೊನೆಗೆ ಅವನು ತೋಟವನ್ನು ಮಾರಿ ಚಿನ್ನವನ್ನು ಖರೀದಿಸಿದ. ಎಲ್ಲವನ್ನು ಪೆಟ್ಟಿಗೆಯಲ್ಲಿ ಹಾಕಿ ಭದ್ರವಾಗಿ ಇಟ್ಟ. ರಾತ್ರಿ ಮಲಗಿದಾಗ ಜಿಪುಣನಿಗೆ ಪೆಟ್ಟಿಗೆಗೆ ಬೀಗ ಹಾಕಿದ್ದೇನೋ ಇಲ್ಲವೋ ಎಂದು ಸಂಶಯವಾಯಿತು. ಪುನಃ ಎದ್ದು ಬಂದು ಪೆಟ್ಟಿಗೆಯನ್ನು ನೋಡಿದ. ಎಲ್ಲವೂ ಭದ್ರವಾಗಿಯೇ ಇದೆ ಎಂದು ಖಚಿತ ಪಡಿಸಿದ ನಂತರ ಹೋಗಿ ಮಲಗಿದ. ಸ್ವಲ್ಪ ಹೊತ್ತಿನ ನಂತರ ಪುನಃ ಸಂಶಯ. ಎಲ್ಲ ಚಿನ್ನವನ್ನು ಪೆಟ್ಟಿಗೆಯಲ್ಲಿ ಇಡಲಿಲ್ಲವೋ? ಮತ್ತೊಮ್ಮೆ ಎದ್ದು ಬಂದು ಪೆಟ್ಟಿಗೆಯನ್ನು ತೆರೆದು ಲೆಕ್ಕ ಮಾಡಿ ಹೋದ.

ಮಲಗಿದಾಗ ನಿದ್ರೆ ಬರುವುದಿಲ್ಲ ಮತ್ತೂ ಸಂಶಯ. ನಿದ್ರಿಸುವಾಗ ಯಾರಾದರೂ ಕಳ್ಳರು ಬಂದು ಚಿನ್ನವನ್ನೆಲ್ಲಾ ದೋಚಿದರೆ ಮತ್ತೆ ಜೀವಿಸುವುದು ಹೇಗೆ? ಹೀಗೆ ಯೋಚಿಸಿ ಜಿಪುಣನಿಗೆ ನಿದ್ರೆ ಬೀಳಲಿಲ್ಲ. ಹೇಗೂ ಆ ರಾತ್ರಿ ನಿದ್ರೆ ಇಲ್ಲದೆ ಕಳೆದು ಹೋಯಿತು.

ಮರುದಿನ ಜಿಪುಣ ಒಂದು ಹೊಸ ಉಪಾಯವನ್ನು ಹೂಡಿದ. ಕತ್ತಲಾದಾಗ ಪೆಟ್ಟಿಗೆಯನ್ನು ಅಂಗಳದಲ್ಲಿ ಮಣ್ಣಿನಡಿಯಲ್ಲಿ ಹೂತು ಅದರ ಮೇಲೆ ತುಂಬಾ ಎಲೆಗಳನ್ನು ಕಸಕಡ್ಡಿಗಳನ್ನು ಹಾಕಿ ಇಟ್ಟ. ಇನ್ನು ಯಾವ ಕಳ್ಳನಿಗೂ ಇದನ್ನು ಕಂಡು ಹಿಡಿಯಲು ಸಾಧ್ಯವಿಲ್ಲ ಎಂದು ಸಮಾಧಾನವಾಯಿತು.

ಮರುದಿನ ಮಧ್ಯರಾತ್ರಿ. ಎಲ್ಲೆಲ್ಲೂ ಅಂಧಕಾರ. ಲೋಕವು ಗಾಢ ನಿದ್ರೆಯಲ್ಲಿದೆ. ಕೀಟಗಳು ಮಾತ್ರ ಕೀ ಕೀ ಎಂಬ ಶಬ್ದ ಮಾಡುತ್ತಿತ್ತು.

ಜಿಪುಣ ಮೆಲ್ಲನೆ ಎದ್ದು ಬೆಳಕನ್ನು ಹಿಡಿದು ಅಂಗಳಕ್ಕೆ ಇಳಿದ. ಎಲ್ಲ ಕಡೆಗೂ ಕಣ್ಣೋಡಿಸಿದ. ಎಲ್ಲಿಯೂ ಯಾರೂ ಇಲ್ಲ. ಶಬ್ದಮಾಡದೆ ಪೆಟ್ಟಿಗೆಯನ್ನು ಹೊರತೆಗೆದು ಚಿನ್ನವನ್ನು ಲೆಕ್ಕಮಾಡಿ ಸರಿಯಿದೆಯೋ ಎಂದು ನೋಡಿ ಸಂತೋಷದಿಂದ ಪುನಃ ಭದ್ರವಾಗಿ ಅಲ್ಲಿಯೇ ಇಟ್ಟ. ಆದರೆ ಎರಡು ಕಣ್ಣುಗಳು ದೂರದಿಂದ ಇದನ್ನೆಲ್ಲಾ ನೋಡುತ್ತಿತ್ತು.

ಬೆಳಿಗ್ಗೆ ಎದ್ದ ಕೂಡಲೇ ಜಿಪುಣನು ಅಂಗಳಕ್ಕೆ ಓಡಿ ಬಂದ. ಏನು! ಪೆಟ್ಟಿಗೆ ಇದ್ದಲ್ಲಿ ಏನೋ ಒಂದು ಬದಲಾವಣೆ! ತರಗೆಲೆಗಳು ಬದಿಗೆ ಸರಿದಿವೆ! ಚಿನ್ನವಿದ್ದ ಪೆಟ್ಟಿಗೆ ತೆರೆದಿದೆ. ಮತ್ತೆ ಹೇಳುವುದೇನು! ಪೆಟ್ಟಿಗೆಯನ್ನು ಹಿಡಿದು ಜೋರಾಗಿ ಅಳತೊಡಗಿದನು.

ಜಿಪುಣನ ಬೊಬ್ಬೆಯನ್ನು ಕೇಳಿ ನೆರೆಹೊರೆಯವರೆಲ್ಲಾ ಬಂದು ಸೇರಿದರು. ವಿಷಯ ತಿಳಿದಾಗ ಒಬ್ಬನು ಜಿಪುಣನನ್ನು ಒಳಗೆ ಕರೆದು ಕಿವಿಗೆ ಏನೋ ಊದಿದ.

"ಚಿನ್ನ ಕಳೆದು ಹೋದುದಕ್ಕಾಗಿ ಬೇಸರ ಪಡಬೇಡ. ಅದಕ್ಕೆ ಬದಲಾಗಿ ಒಂದು ಒಳ್ಳೆಯ ಮಾರ್ಗ ಹೇಳಿ ಕೊಡುತ್ತೇನೆ."

"ಜ.........ಜ.........ಹೇಳು.........ಹೇಳು" ಜಿಪುಣ ಕಿವಿ ನಿಮಿರಿಸಿ ಕೇಳಿದ.

"ಬಂಗಾರದಿಂದ ನಿನಗೋ ಇತರರಿಗೋ ಏನೂ ಪ್ರಯೋಜನ ಇಲ್ಲವಲ್ಲ! ಆದುದರಿಂದ ಪೆಟ್ಟಿಗೆಯಲ್ಲಿ ಬಿಳಿ ಕಲ್ಲುಗಳನ್ನು ತುಂಬಿಸಿಟ್ಟು ಅದನ್ನು ಬಂಗಾರವೆಂದು ಭಾವಿಸಿದರಾಯಿತು. ಕಳ್ಳರು ಕದಿಯುತ್ತಾರೆಂಬ ಭಯವೂ ಇರದು" ಎಂದು ಸಮಾಧಾನ ಪಡಿಸಿದ.

# ತಂದೆಯ ಉಪದೇಶ

ಬಹಳ ಹಿಂದೆ ಒಬ್ಬ ವ್ಯಾಪಾರಿ ಇದ್ದ. ಆತನಿಗೆ ನಿಸಾರ್ ಎಂಬ ಒಬ್ಬನೇ ಮಗನಿದ್ದ.

ವ್ಯಾಪಾರಿ ಮಗನನ್ನು ತುಂಬಾ ಪ್ರೀತಿಸುತ್ತಿದ್ದ. ಯುವಕನಾದ ನಿಸಾರ್ ಯಾವಾಗಲೂ ತನ್ನ ತಂದೆಯೊಂದಿಗೆ ವ್ಯಾಪಾರದ ಸ್ಥಳಕ್ಕೆ ಹೋಗುತ್ತಿದ್ದ. ಆ ಕಾಲದಲ್ಲಿ ಮದ್ರಸಾಗಳು ಇರಲಿಲ್ಲ. ಬುದ್ಧಿವಂತನಾದ ತಂದೆಯೇ ಮಗನ ಗುರುವಾಗಿದ್ದರು. ಬಿಡುವಿನ ಸಮಯದಲ್ಲಿ ಆತ ತಂದೆ ವ್ಯಾಪಾರ ಮಾಡುವುದನ್ನು ಆಸಕ್ತಿಯೊಂದಿಗೆ ನೋಡುತ್ತಿದ್ದನು.

ನಿಸಾರ್ ಆರೋಗ್ಯವಂತ ಯುವಕನಾದಾಗ ತಂದೆ ಅವನಿಗೆ ವ್ಯಾಪಾರವನ್ನು ಕಲಿಸಿ ಕೊಟ್ಟರು. ವ್ಯಾಪಾರದ ಎಲ್ಲ ಸೂತ್ರಗಳನ್ನು ಅವನು ಕಲಿತನು.

ಒಮ್ಮೆ ತಂದೆ ಮಗನನ್ನು ಕರೆದು ಹೇಳಿದರು, "ನೋಡು ಮಗಾ, ಇಷ್ಟರ ತನಕ ನಾನು ನಿನ್ನನ್ನು ಉತ್ತಮ ರೀತಿಯಲ್ಲಿ ಬೆಳೆಸಿದೆ. ನಿನಗೆ ಬೇಕಾದ ಎಲ್ಲ ರೀತಿಯ ಶಿಕ್ಷಣಗಳನ್ನು ನೀಡಿದೆ. ಇಂದು ನೀನೊಬ್ಬ ಆರೋಗ್ಯವಂತ ಯುವಕನಾಗಿ ಬೆಳೆದಿರುವೆ. ಈಗ ನೀನು ಸ್ವತಃ ದುಡಿಯಲು ಶಕ್ತನಾಗಿರುವೆ. ಆದುದರಿಂದ ಇನ್ನು ನೀನು ಸ್ವತಃ ಒಂದು ವ್ಯಾಪಾರ ಮಾಡಲು ತಯಾರಾಗು. ಯಾರನ್ನೂ ಆಶ್ರಯಿಸದೆ ಜೀವಿಸುವ ಮಾರ್ಗವನ್ನು ನೋಡು."

ತಂದೆಯ ಉಪದೇಶವು ಮಗನಿಗೆ ಇಷ್ಟವಾಯಿತು. ತಂದೆಯ ಮಾತಿನಂತೆ ಸ್ವಂತ ವ್ಯಾಪಾರ ಮಾಡಲು ಅವನಿಗೆ ಆಶೆ ಇತ್ತು.

ತಂದೆ ಹೇಳಿದರು, "ಹತ್ತಿರದ ಗ್ರಾಮ ನಿನಗೆ ವ್ಯಾಪಾರಕ್ಕೆ ಉತ್ತಮ. ಅಲ್ಲಿ ವ್ಯಾಪಾರಿಗಳು ಕಡಿಮೆ. ಆದುದರಿಂದ ಸ್ಪರ್ಧೆ ಇರಲಿಕ್ಕಿಲ್ಲ. ಲಾಭ ಜಾಸ್ತಿ ಸಿಗಬಹುದು. ನಗರ ತುಂಬಾ ದೂರವಿದೆ. ಕಾಡು, ಗುಡ್ಡ-ಬೆಟ್ಟಗಳನ್ನು ದಾಟಿ, ಹತ್ತಿ ಹೋಗಬೇಕು."

ನಿಸಾರ್ ಪ್ರಯಾಣಕ್ಕಾಗಿ ತಯಾರಿ ಮಾಡಿದ. ತಂದೆಯವರು ಅವನಿಗೆ ವ್ಯಾಪಾರ ಮಾಡಲು ಬೇಕಾದ ಹಣ ಮತ್ತು ಒಂದು ಕುದುರೆ ನೀಡಿದರು. ತಂದೆ ತಾಯಿಗಳೊಂದಿಗೂ ಸಂಬಂಧಿಕರೊಂದಿಗೂ ವಿದಾಯ ಹೇಳಿ ಮನೆಯಿಂದ ಹೊರಟ.

ಬಹಳ ದೂರ ಹೋದ ನಂತರ ದಾರಿ ಮುಗಿಯಿತು. ನಂತರ ಗುಡ್ಡ-ಬೆಟ್ಟಗಳು, ಕಲ್ಲು-ಮುಳ್ಳುಗಳು, ತುಂಬಿದ ಮಾರ್ಗ. ಬಹಳ ಕಷ್ಟದಿಂದ ಆ ದಾರಿಯಲ್ಲಿ ಮುಂದೆ ಸಾಗಿದ. ಕೊನೆಗೆ ಒಂದು ಕಾಡಿಗೆ ಹೋಗಿ ತಲುಪಿದ. ದಟ್ಟವಾದ ಮರಗಳಿಂದ ತುಂಬಿದ ಸ್ಥಳ. ಬಿಸಿಲು ಕೂಡ ತಲುಪದ ಕಾಡು. ಅತ್ತ ಇತ್ತ ಪಕ್ಷಿಗಳ ಚಿಲಿಪಿಲಿ ಶಬ್ದ ಮಾತ್ರ. ನಿಸಾರ್‌ನಿಗೆ ಭಯವಾಗುವ ಬದಲು ಸಂತೋಷವಾಯಿತು. ಕಾಡಿನ ಸೌಂದರ್ಯವನ್ನು ಸವಿಯುತ್ತಾ ಕುದುರೆಯಲ್ಲಿ ಮುಂದೆ ಸಾಗಿದ.

ಸ್ವಲ್ಪ ಮುಂದೆ ಸಾಗಿದಾಗ ಸಣ್ಣ ಒಂದು ಜಲಪಾತ. ನೀರು ಬೆಟ್ಟದಿಂದ ಧಾರಾಕಾರವಾಗಿ ಹರಿದು ಬರುತ್ತಿತ್ತು. ಅದರ ಹತ್ತಿರ ಒಂದು ದೊಡ್ಡ ಪರ್ವತ. ಅದರ

ಮಧ್ಯದಲ್ಲಿ ವಿಶಾಲವಾದ ಒಂದು ಗುಹೆ. ಆಹಾರ ಸೇವಿಸಲು ಮತ್ತು ವಿಶ್ರಾಂತಿಗಾಗಿ ಹೇಳಿದ ಜಾಗ.

ನಿಸಾರ್ ಕುದುರೆಯಿಂದ ಇಳಿದು ಅದನ್ನು ಒಂದು ಮರಕ್ಕೆ ಕಟ್ಟಿ ಹಾಕಿದ. ಗುಹೆಯಲ್ಲಿ ಕುಳಿತುಕೊಂಡು ಆಹಾರ ಸೇವಿಸಲು ಆರಂಭಿಸಿದ. ಥಟ್ಟನೆ ಒಂದು ಶಬ್ದ ಕೇಳಿ ಬಂತು. ದಯನೀಯವಾದ ಕೂಗು. ಯಾವುದೋ ಒಂದು ಪ್ರಾಣಿ ಅಪಘಾತಕ್ಕೆ ಒಳಗಾದ ಹಾಗೆ.

ನಿಸಾರ್ ಒಂದು ಬೆಟ್ಟವನ್ನು ಏರಿ ನೋಡಿದ. ಅಲ್ಲಿ ಒಂದು ನರಿ ದಯನೀಯವಾಗಿ ಅಳುತ್ತಾ ಇದೆ. ಹಸಿವು ಮತ್ತು ಬಾಯಾರಿಕೆಯಿಂದ ಬಳಲಿ ಬೆಂಡಾಗಿದೆ. ಪಾಪ! ತುಂಬಾ ದಿವಸದಿಂದ ಆಹಾರ ಸೇವಿಸದ ಹಾಗೆ ಇದೆ.

ಕೈಯಲ್ಲಿದ್ದ ಆಹಾರದಿಂದ ಸ್ವಲ್ಪ ಕೊಟ್ಟರೆ ಹೇಗೆ ಎಂದು ನಿಸಾರ್ ಆಲೋಚಿಸಿದ. ಆಗಲೇ ಅದರ ಹತ್ತಿರದ ಕಾಡಿನಿಂದ ಒಂದು ಶಬ್ದ ಕೇಳಿ ಬಂತು. ನೋಡುವಾಗ ಒಂದು ಸಿಂಹ. ನಿಸಾರ್ ಬೇಗನೇ ಅಡಗಿ ಕುಳಿತ. ಏನು ಮಾಡುವುದು ಎಂದು ಅವನಿಗೆ ಗೊತ್ತಾಗುವುದಿಲ್ಲ. ಸ್ವಲ್ಪ ಹೊತ್ತಿನ ನಂತರ ಅವನಿಗೆ ಧೈರ್ಯ ಬಂತು. ಅವನು ಪುನಃ ಕಣ್ಣೆತ್ತಿ ನೋಡಿದ. ಕಾಡಿನ ರಾಜನ ಬಾಯಲ್ಲಿ ಒಂದು ಜಿಂಕೆ ಇದೆ. ರಾಜನಿಗೆ ಇವತ್ತಿನ ಆಹಾರ ಸಿಕ್ಕಿದೆ. ಇನ್ನು ಬೇರೆಯವರನ್ನು ಉಪದ್ರವಿಸಲಿಕ್ಕೆ ಇಲ್ಲ ಎಂದು ನಿಸಾರ್ ಸಮಾಧಾನ ಪಟ್ಟುಕೊಂಡ.

ಹಸಿವೆಯಿಂದ ಬಳಲಿದ ನರಿ ಈ ದೃಶ್ಯವನ್ನು ನೋಡಿ ಬಾಯಿಯಿಂದ ನೀರು ಸುರಿಸುತ್ತಾ ಇತ್ತು. ಸಿಂಹ ತನಗೆ ಬೇಕಾದಷ್ಟು ತಿಂದು ಬಿಟ್ಟು ಹೋಯಿತು. ಇದನ್ನು ನೋಡಿ ನರಿ ಮೆಲ್ಲನೆ ಎದ್ದು ಬಂದು ತನ್ನ ಹೊಟ್ಟೆ ತುಂಬಿಸಿತು. ಯಾವುದೇ ಪ್ರಯತ್ನವಿಲ್ಲದೆ ನರಿಯ ಹೊಟ್ಟೆ ತುಂಬಿತು. ನರಿಯ ಆಯಾಸ ದೂರವಾಯಿತು.

ಇದನ್ನು ನೋಡಿದ ನಿಸಾರ್ ಆಲೋಚಿಸಿದ. "ನಾನು ಎಂತಹ ಮೂರ್ಖ! ನರಿ ಮಾಡುವುದನ್ನು ನೋಡಲಿಲ್ಲವೇ? ಅದಕ್ಕೆ ಸಹಾಯ ಮಾಡಲು ಈ ಕಾಡಿನಲ್ಲಿ ಯಾರೂ ಇಲ್ಲ. ಆದರೂ ಯಾವುದೇ ಪ್ರಯತ್ನ ಪಡದೆ ಅದಕ್ಕೆ ಆಹಾರ ಲಭಿಸುತ್ತದೆ. ಬೇಟೆಯಾಡುವುದು ದೊಡ್ಡ ದೊಡ್ಡ ವನ್ಯ ಮೃಗ, ನರಿಗೆ ಅದರ ಎಂಜಲು ಸಾಕು. ನರಿ ಆರಾಮವಾಗಿ ಜೀವಿಸುತ್ತದೆ. ನನಗಾದರೋ ಸಹಾಯಕ್ಕಾಗಿ ಎಷ್ಟೋ ಮಂದಿ ಇದ್ದಾರೆ. ತಂದೆಯ ಕೈಯಲ್ಲಿಯೇ ತುಂಬಾ ಸಂಪತ್ತು ಇದೆ. ಅವರ ವ್ಯಾಪಾರ ಲಾಭದಲ್ಲಿ ನಡೆಯುತ್ತಿದೆ. ನನಗೆ ಜೀವಿಸಲು ಅದರ ಒಂದಂಶ ಸಾಕು. ಮತ್ತೆ ಯಾಕೆ ನಾನು ಇಷ್ಟು ಕಷ್ಟ ಪಡಬೇಕು.

ಹೀಗೆ ಆಲೋಚಿಸಿದಾಗ ನಿಸಾರ್‌ನಿಗೆ ಮನೆಗೆ ಮರಳುವ ಎಂದಾಯಿತು.

ಸಂಜೆಯ ಹೊತ್ತು, ಸೂರ್ಯ ಅಸ್ತಮಿಸುವ ಸಮಯವಾಯಿತು. ಪಕ್ಷಿಗಳು ಚಿಲಿಪಿಲಿಗುಟ್ಟುತ್ತಾ ತಮ್ಮ ಗೂಡಿನೆಡೆಗೆ ಸಾಗುವ ಭರ. ನಿಸಾರ್‌ನ ತಂದೆ ಮಗ್ರಿಬ್ ನಮಾಝಿಗಾಗಿ ವುಝೂ ಮಾಡುತ್ತಾ ಇದ್ದಾರೆ. ಆಗ ನಿಸಾರ್ ಕುದುರೆಯನ್ನು ಓಡಿಸುತ್ತಾ ವೇಗವಾಗಿ ಬಂದು ಮನೆ ಸೇರಿದ.

ನಿಸಾರ್ ತಂದೆಯೊಂದಿಗೆ ನಮಾಝ್ ಮಾಡಿದ. ನಮಾಝ್ ಮುಗಿದ ನಂತರ ತಂದೆ ಮಗನ ಮುಖವನ್ನು ನೋಡಿದರು. ವ್ಯಾಪಾರಕ್ಕೆ ಹೋಗಿ ಇಷ್ಟು ಬೇಗ ಮರಳಿ ಬಂದದ್ದು ಹೇಗೆ ಎಂದು ಕೇಳುವ ಹಾಗೆ, ನಿಸಾರ್ ನಡೆದ ಘಟನೆಯನ್ನು ಸಂಪೂರ್ಣವಾಗಿ ತಿಳಿಸಿದ.

ತಂದೆ ಎಲ್ಲ ವೃತ್ತಾಂತಗಳನ್ನು ಕೇಳಿದ ನಂತರ ತಲೆ ತಗ್ಗಿಸಿ ಕುಳಿತು ಕೊಂಡರು. ಸ್ವಲ್ಪ ಹೊತ್ತಿನ ನಂತರ ಮುಗುಳ್ನಗುತ್ತಾ ಹೇಳಿದರು:

"ನೋಡು ಮಗಾ, ಅನ್ಯರ ಎಂಜಲು ತಿನ್ನುವ ನರಿ ಆಗಬಾರದು. ಬದಲಾಗಿ ಅನ್ಯರು ಅವಲಂಬಿಸುವ ಸಿಂಹ ಆಗಬೇಕು. ಇದಾಗಿತ್ತು ನನ್ನ ಆಶೆ."

ಇದನ್ನು ಕೇಳಿದಾಗ ನಿಸಾರ್ ತಲೆ ತಗ್ಗಿಸಿದ. ಅವನಿಗೆ ಬೇಸರವಾಯಿತು. ತಲೆಯಲ್ಲಿ ಕೈಯಿಟ್ಟು ಕುಳಿತುಕೊಂಡ. ತಂದೆ ಅವನನ್ನು ಸಮಾಧಾನ ಪಡಿಸಿದರು. "ಇನ್ನು ಮುಂದೆ ಏನಾದರೂ ಮಾಡುವುದಕ್ಕೆ ಮುಂಚೆ ಹಲವು ಸಲ ಆಲೋಚಿಸಬೇಕು."

ರಾತ್ರಿ ನಿಸಾರ್‌ನಿಗೆ ನಿದ್ರೆ ಬೀಳುವುದಿಲ್ಲ, ತನ್ನಿಂದ ಆಗಿ ಹೋದ ತಪ್ಪಿನ ಕುರಿತು ಚಿಂತಿಸಿದ. ಕೊನೆಗೆ ಒಂದು ತೀರ್ಮಾನಕ್ಕೆ ಬಂದ. ಬೆಳಿಗ್ಗೆ ಎದ್ದು ಮನೆಯವರೊಂದಿಗೆ ವಿದಾಯ ಹೇಳಿ ಪುನಃ ವ್ಯಾಪಾರಕ್ಕಾಗಿ ಪ್ರಯಾಣಿಸಿದ.

ಹೆಚ್ಚು ಕಾಲ ಕಳೆಯಲಿಲ್ಲ. ನಿಸಾರ್ ಒಬ್ಬ ದೊಡ್ಡ ವ್ಯಾಪಾರಿ ಆದ. ಅವನ ಕೈ ಕೆಳಗೆ ಹಲವಾರು ಕೆಲಸದಾಳುಗಳು. ತಂದೆಯ ಉಪದೇಶ ಯಾವಾಗಲೂ ಅವನ ಕಿವಿಗೆ ಅಪ್ಪಳಿಸುತ್ತಿತ್ತು. "ಅನ್ಯರ ಎಂಜಲು ತಿನ್ನುವ ನರಿ ಆಗಬಾರದು, ಅನ್ಯರು ಅವಲಂಬಿಸುವ ಸಿಂಹ ಆಗಿರಬೇಕು."

---

# ತೋಟದ ನಿಧಿ

ಹಿಂದೆ ಒಂದು ಗ್ರಾಮದಲ್ಲಿ ಒಬ್ಬ ಕೃಷಿಕನಿದ್ದ. ಬಹಳ ಉತ್ಸಾಹಿ. ಆಲಸ್ಯ ಎಂಬುದನ್ನು ಆತ ತಿಳಿದೇ ಇಲ್ಲ. ದಿನವಿಡೀ ಹಿತ್ತಲಲ್ಲಿ ಕೆಲಸ ಮಾಡುತ್ತಿದ್ದನು. ಹೀಗೆ ಆತನ ಹಿತ್ತಲು ಕೆಲವು ತಿಂಗಳಲ್ಲಿ ಸುಂದರವಾದ ಒಂದು ತೋಟವಾಯಿತು. ತೆಂಗಿನ ಮರ, ಕಂಗು, ಕರಿಮೆಣಸು ಹೀಗೆ ಹಲವು ರೀತಿಯ ಕೃಷಿ ಇತ್ತು. ಒಂದೊಂದು ವಸ್ತುವನ್ನು ಸರಿಯಾಗಿ ನೋಡಿಕೊಂಡನು. ಹೀಗೆ ಸ್ವಲ್ಪ ಕಾಲದ ನಂತರ ತುಂಬಾ ಆದಾಯ ಲಭಿಸಿತು. ಅಂದಿನಿಂದ ಕಷ್ಟವೆಂಬುದನ್ನು ಕೃಷಿಕನ ಕುಟುಂಬವು ತಿಳಿದಿಲ್ಲ.

ಆತನಿಗೆ ಆರೋಗ್ಯವಂತರಾದ ನಾಲ್ಕು ಮಕ್ಕಳಿದ್ದರು. ಆದರೆ ನಾಲ್ಕು ಮಕ್ಕಳೂ ಬಹಳ ಸೋಮಾರಿಗಳು. ವಿಹಾರಕ್ಕಾಗಿ ಕೂಡಾ ತೋಟಕ್ಕೆ ಹೋಗುತ್ತಿರಲಿಲ್ಲ. ತಂದೆ ಆದಷ್ಟು ಉಪದೇಶ ನೀಡಿದರು. ಆದರೆ ಯಾವುದೇ ಪ್ರಯೋಜನವಾಗಲಿಲ್ಲ.

ಕಾಲವು ಮುಂದುವರಿಯಿತು. ಒಮ್ಮೆ ಕೃಷಿಕ ರೋಗ ಗ್ರಸ್ಥನಾದನು. ವೃದ್ಧಾಪ್ಯಕ್ಕೆ ತಲುಪಿದನು. ತೋಟವನ್ನು ನೋಡಿಕೊಳ್ಳಲು ಅಸಾಧ್ಯವಾಯಿತು. ಮಕ್ಕಳನ್ನು ಕರೆದು ಪುನಃ ಉಪದೇಶ ಮಾಡಿದನು. ಅವನು ನೋಡಲಿ, ಇವನು ನೋಡಲಿ, ಎಂದು ಹೇಳಿ ಮಕ್ಕಳು ದೂರ ಸರಿದರು.

ದಿನ ಕಳೆದಂತೆ ತೋಟದ ಆದಾಯ ಕಡಿಮೆಯಾಯಿತು. ಕೃಷಿಕನ ರೋಗವು ಉಲ್ಬಣಿಸಿತು. ಮೈಗಳ್ಳರಾದ ಮಕ್ಕಳು ಯಾವುದೇ ಚಿಂತೆಯಿಲ್ಲದೆ ಜೀವಿಸುತ್ತಿದ್ದರು. ತಂದೆ ಎಲ್ಲಿಯೋ ಹಣವನ್ನು ಶೇಖರಿಸಿಟ್ಟಿದ್ದಾರೆ. ತಂದೆಯ ನಂತರ ಅದರಿಂದ ದಿನ ಕಳೆಯಬಹುದು ಎಂದು ಭಾವಿಸಿದರು.

ಕೊನೆಗೆ ರೋಗವು ಇನ್ನೂ ಜಾಸ್ತಿಯಾದಾಗ ತಂದೆ ಮಕ್ಕಳನ್ನು ಕರೆದು ಹೇಳಿದರು: "ಮಕ್ಕಳೇ, ನನಗೆ ಈ ಲೋಕಕ್ಕೆ ವಿದಾಯ ಹೇಳುವ ಸಮಯ ಹತ್ತಿರ ಬಂದಿದೆ. ನನ್ನ ಜೀವನ ಕಾಲದ ಎಲ್ಲಾ ಸಂಪಾದನೆ ತೋಟದಲ್ಲಿರುವುದು. ನನ್ನ ನಂತರ ನೀವು ಅದನ್ನು ತೆಗೆದು ಸುಖವಾಗಿ ಜೀವಿಸಿರಿ." ನಂತರ ಕೃಷಿಕ ಹೆಚ್ಚು ಕಾಲ ಉಳಿಯಲಿಲ್ಲ.

ತಂದೆಯ ಮರಣಾನಂತರ ನಾಲ್ವರು ಒಟ್ಟು ಸೇರಿ ಮೊದಲು ತೋಟದ ನಿಧಿಯನ್ನು ತೆಗೆದು ಪಾಲು ಮಾಡಲು ತೀರ್ಮಾನಿಸಿದರು. ಆದರೆ ತೋಟದಲ್ಲಿ ಎಲ್ಲಿ ನಿಧಿ ಇದೆ ಎಂಬುದು ನಾಲ್ವರಿಗೂ ಗೊತ್ತಿಲ್ಲ. ನಾಲ್ಕು ಭಾಗದಿಂದಲೂ ಅಗೆಯಲು ತೀರ್ಮಾನಿಸಿದರು.

ಮರುದಿನ ಎದ್ದು ನಾಲ್ಕು ಮಂದಿಯೂ ಹಾರೆಯನ್ನು ಹಿಡಿದು ತೋಟಕ್ಕೆ ನಡೆದರು. ಅಗೆಯಲು ಶುರು ಮಾಡಿದರು. ತೋಟವನ್ನು ಸಂಪೂರ್ಣವಾಗಿ ಅಗೆದರು. ಹಲವು ದಿನಗಳ ಕಾಲ ಅಗೆದರು. ಆದರೆ ಯಾವುದೇ ಪ್ರಯೋಜನವಾಗಲಿಲ್ಲ. ಅವರಿಗೆ ಯಾವೊಂದು ನಿಧಿಯೂ ಸಿಗಲಿಲ್ಲ. ಅವರು ನಿರಾಶರಾದರು.

ಹೀಗೆ ಒಂದು ದಿನ ಧಾರಾಳವಾಗಿ ಮಳೆ ಸುರಿಯಿತು. ಒಣಗಿ ಬಳಲಿದ ತೋಟವು ಪುನಃ ಹಚ್ಚ ಹಸುರಾದವು. ಮೊಳಕೆ ಬರಲು ಪ್ರಾರಂಭವಾಯಿತು. ಮರ-ಗಿಡಗಳಿಗೆ ಒಂದು ಹೊಸ ಜೀವನ ಸಿಕ್ಕಿದಂತಾಯಿತು.

ಸ್ವಲ್ಪ ದಿನದ ವಿಶ್ರಾಂತಿಯ ನಂತರ ಪುನಃ ಆಳದಲ್ಲಿ ಅಗೆಯಲು ಅಣಿಯಾದರು. ಆದರೆ ತೋಟದಲ್ಲಿ ಕಂಡ ಬದಲಾವಣೆಯನ್ನು ನೋಡಿ ದೊಡ್ಡ ಮಗನಿಗೆ ವಿಷಯ

ಗೊತ್ತಾಯಿತು. ಅವನು ಬಾಕಿ ಇದ್ದವರನ್ನು ಕರೆದು ಹೀಗೆ ಹೇಳಿದನು, "ತಮ್ಮಂದಿರೇ, ನಾವು ದೊಡ್ಡ ಮೂರ್ಖರು. ನಮ್ಮ ತಂದೆಯು ಈ ತೋಟದಲ್ಲಿ ಯಾವುದೇ ನಿಧಿಯನ್ನು ಇಡಲಿಲ್ಲ. ಈ ತೋಟವೇ ನಮ್ಮ ತಂದೆಯ ನಿಧಿಯಾಗಿದೆ. ಇದನ್ನು ಒಳ್ಳೆಯ ರೀತಿಯಲ್ಲಿ ನಾವು ನೋಡಿದರೆ ಇದಕ್ಕಿಂತ ದೊಡ್ಡ ನಿಧಿ ಬೇರೆ ಇಲ್ಲ. ಈಗಲೇ ನೀವು ನೋಡಲಿಲ್ಲವೇ! ನಾವು ನಿಧಿಯನ್ನು ಹುಡುಕುತ್ತಾ ತೋಟವನ್ನು ಅಗೆದೆವು. ಅದರಿಂದ ಒಣಗಿದ ಗಿಡಗಳು ಎಷ್ಟು ಬೇಗ ಹಸಿರಾದವು. ಈ ಸಲ ನಮಗೆ ಒಳ್ಳೆಯ ಆದಾಯ ಸಿಗಬಹುದು. ತಂದೆ ಹೇಳಿದ ಮಾತು ನೆನಪಿದೆಯಾ-

"ಕೈ ಕೆಸರಾದರೆ ಬಾಯಿ ಮೊಸರು."

◆ ◆ ◆